

# ಲಬ್ಧಪ್ರಣಾಶ

೬

ರೈತನ ಹೆಂಡತಿ ಆ ದುಷ್ಟನೊಂದಿಗೆ ಊರು ಬಿಟ್ಟು ಹೋಗುತ್ತಿರುವಾಗ ಅವರ ದಾರಿಯಲ್ಲಿ ಒಂದು ನದಿ ಅಡ್ಡ ಬಂದಿತು. ಅಲ್ಲಿ ದೋಣಿಯೊಂದಿತ್ತೇ ಹೊರತು ದೋಣಿ ನಡೆಸುವವರಾರೂ ಕಾಣಲಿಲ್ಲ. ದುಷ್ಟನು ಅವಳೊಂದಿಗೆ, "ಪ್ರಿಯಳೇ. ನೀನು ನಿನ್ನ ಮೈ ಮೇಲಿನ ಆಭರಣಗಳನ್ನೂ ಹಣವನ್ನೂ ಸೀರೆಗಳ ಗಂಟಿನಲ್ಲಿ ಕಟ್ಟಿ ಇತ್ತಕೊಡು. ದೋಣಿಯಲ್ಲಿ ತೂತಿರುವ ಹಾಗಿದೆ. ಆ ಗಂಟನ್ನು ನಾನು ಕೈಯಲ್ಲಿ ಹಿಡಿದುಕೊಂಡಿರುತ್ತೇನೆ." ಎಂದನು. ಅವಳು ಹಾಗೇ ಮಾಡಿದಳು. ಅವನು ಆ ಗಂಟಿನೊಂದಿಗೆ ದೋಣಿ ಹತ್ತುತ್ತ, "ಜಾಗ್ರತೆ! ನಾನು ಹತ್ತಿ ನಿನ್ನನ್ನು ಕೈ ಹಿಡಿದು ಏರಿಸಿ ಕೊಳ್ಳುತ್ತೇನೆ" ಎನ್ನುತ್ತಾ ದೋಣಿಯನ್ನು ಸರ್ರನೆ ಮುಂದಕ್ಕೆ ಬಿಟ್ಟು ನದಿಯಲ್ಲಿ ಹೊರಟೇ ಹೋಗಿಬಿಟ್ಟನು.

ಅನಾಥಳಾಗಿ ನಿಂತ ರೈತನ ಹೆಂಡತಿಯ ಕಣ್ಣಿಗೆ ಒಂದು ದೃಶ್ಯವು ಕಾಣಿಸಿತು. ಒಂದು ಹೆಣ್ಣು ನರಿ ಬಾಯಿಯಲ್ಲಿ ಮಾಂಸ ಕಚ್ಚಿಕೊಂಡು ಬರುತ್ತಿದ್ದಿತು. ಆಗ ದೊಡ್ಡದೊಂದು ಮೀನು ನೀರಿನಿಂದ ಹಾರಿ ಗುರಿ ತಪ್ಪಿ ದಂಡೆಗೆ ಬಿತ್ತು. ನರಿ ಮಾಂಸದ ತುಂಡನ್ನು ಕೆಳಗಿಟ್ಟು ಆ ಮೀನಿನ ಕಡೆಗೆ ಬರ ತೊಡಗಿತು. ನರಿಯನ್ನು ನೋಡಿದ ಮೀನು ವಿಶ್ವ ಪ್ರಯತ್ನದಿಂದ ಮತ್ತೆ ನೀರಿಗೆ ಹಾರಿ ಕಣ್ಮರೆಯಾಯಿತು. ನರಿ ತನ್ನ ಮಾಂಸದ ತುಂಡಿಗಾಗಿ ಹಿಂದಿರುಗಿತು. ಅಷ್ಟರೊಳಗೆ ರಿವ್ವನೆ ಹಾರಿ ಬಂದ ಹದ್ದು ಆ ಮಾಂಸದ ತುಂಡನ್ನು ಹಾರಿಸಿಕೊಂಡು ಹೋಯಿತು.

ಮೊಸಳೆ ಈ ಕಥೆಯನ್ನು ಹೇಳಿ ಮುಗಿಸುವ ಸಮಯಕ್ಕೆ ಇನ್ನೊಂದು ಜಲಚರವು ಬಂದು ಅದರೊಂದಿಗೆ "ನಿನ್ನ ಮನೆಯನ್ನು ಮತ್ತೊಂದು ಮೊಸಳೆ ಆಕ್ರಮಿಸಿಕೊಂಡಿದೆ. ಇನ್ನೇನು ಮಾಡುವಿಯೋ." ಎಂದು ಸುದ್ದಿ ಹೇಳಿತು.

ಈ ಮಾತನ್ನು ಕೇಳಿ, "ಅಯ್ಯೋ! ವಿಧಿ ನನ್ನ ಮೇಲೆ ಬಹಳ ಅನ್ಯಾಯ ಮಾಡಿಬಿಟ್ಟಿತು. ಮಿತ್ರ ನನ್ನು ಕಳೆದುಕೊಂಡೆನು. ಹೆಂಡತಿ ಹೋದಳು, ನನ್ನ ಮನೆ ಶತ್ರುವಿನ ವಶವಾಯಿತು. ಈಗೇನು ಮಾಡಲಿ? ಈ ಕೋತಿಯನ್ನೇ ಆಲೋಚನೆ ಕೇಳುತ್ತೇನೆ." ಎಂದು



ಕೊಂಡು ಕೋತಿಯೊಂದಿಗೆ ತನಗೆ ಬಂದ ಹೊಸ ಸಮಸ್ಯೆಯನ್ನು ಹೇಳಿಕೊಂಡಿತು.

"ಎಲೋ, ನನಗೆ ದ್ರೋಹವನ್ನೇ ಬಗೆದ ನೀನು ಈಗ ನನ್ನ ಸಹಾಯವನ್ನು ಹೊಂದಲಿಕ್ಕೆ ಅರ್ಹನೇ ಅಲ್ಲ." ಎಂದು ಹೇಳಿತು ಕೋತಿ.

ಅದಕ್ಕೆ ಮೊಸಳೆ, "ಅಪ್ಪಾ, ನಿನಗೆ ಅಪಕಾರ ಮಾಡಿದವನಿಗೆ ಉಪಕಾರ ಮಾಡುವುದೇ ಪುಣ್ಯವೆಂದು ದೊಡ್ಡವರು ಹೇಳುತ್ತಾರೆ. ಮತ್ತೇನು ಹೇಳಲಿ? ಏನು ತಾನೇ ಮಾಡಲಿ? ನನ್ನದೆಲ್ಲಾ ಹೋಯಿತು!" ಎಂದು ಪ್ರಲಾಪಿಸಿತು.

"ಮೂರ್ಖ ಮೊಸಳೆಯೇ! ಇದು ಅಳುತ್ತಾ ಕುಳಿತುಕೊಳ್ಳುವ ಸಮಯವೇ ನಿನಗೆ? ಧೈರ್ಯದಿಂದ ಮುನ್ನುಗ್ಗಬೇಕು. ಹೋಗಿ ನಿನ್ನ ಶತ್ರುವಿನೊಂದಿಗೆ ಹೋರಾಡು. ಶತ್ರುವನ್ನು ಜಯಿಸಬೇಕಾದರೆ ಉಪಾಯವೂ ಬೇಕು. ಅವನ ಮುಂದೆ ಸಾಷ್ಟಾಂಗ ಬೀಳಬೇಕು. ಬಲಿಷ್ಠನಾದರೆ ಮತ್ತೊಬ್ಬನನ್ನು ಅವನ ಮೇಲೆ ಕೆರಳಿಸಬೇಕು. ನೀಚನಾದ ಲಂಚ ಕೊಡಬೇಕು. ಸಮಾನ ಬಲನಾಗಿದ್ದ ಹೋರಾಡಬೇಕು. ನಿನಗೊಂದು ನರಿಯ ಕ ಹೇಳುತ್ತೇನೆ, ಕೇಳು" ಎಂದು ಕೋತಿ ಅ ಹೇಳಿತು :

## ನರಿ ಮತ್ತು ನಾಲ್ವರು ಶತ್ರುಗಳು

ಒಂದು ಅರಣ್ಯದಲ್ಲಿ ಮಹಾಚತುರಕವೆಂಬ ನರಿ ಇದ್ದಿತು. ಒಂದುಸಾರಿ ಅರಣ್ಯದಲ್ಲಿ ತಿರುಗಾಡುತ್ತ, ಸಹಜವಾಗಿ ಸತ್ತ ಒಂದು ಆನೆಯನ್ನು ನೋಡಿತು. ಅದು ಆನೆಯ ಕಳೇಬರದ ಸುತ್ತಲೂ ಪ್ರದಕ್ಷಿಣೆ ಮಾಡುತ್ತಾ ಪರೀಕ್ಷಿಸಿ ನೋಡಿತು. ಆದರೆ ಎಲ್ಲಿಯೂ ಚರ್ಮವು ಬಿರುಟಿರುವುದು ಕಾಣಲಿಲ್ಲ. ದಪ್ಪವಾದ ಆನೆಯ ಚರ್ಮವನ್ನು ಸೀಳುವ ಶಕ್ತಿ ನರಿಗಿಲ್ಲ. ನರಿ ಏನು ಮಾಡುವುದೆಂದು ಯೋಚಿಸುತ್ತಿರುವಾಗ ಒಂದು ಸಿಂಹ ಆ ಕಡೆಗೇ ಬರುವುದನ್ನು ನೋಡಿತು.

ನರಿ ಸಿಂಹಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ "ಸ್ವಾಮಿ, ತಮಗಾಗಿಯೇ ಈ ಆನೆಯನ್ನು ಕಾವಲು ಕಾದುಕೊಂಡಿದ್ದೇನೆ" ಎಂದಿತು.

"ಇನ್ನೊಬ್ಬರು ಕೊಂದ ಪ್ರಾಣಿಯನ್ನು ನಾನು ಮುಟ್ಟಲಾರೆ, ಆದ್ದರಿಂದ ಇದನ್ನು ನನ್ನ ಬಹುಮಾನವೆಂದುಕೊಂಡು ನೀನೇ ತೆಗೆದುಕೊ" ಎಂದಿತು ಸಿಂಹ.

ನರಿ ಬಹಳ ಸಂತೋಷಪಟ್ಟು, "ಮಹಾಪ್ರಭುಗಳು ತಮ್ಮ ಸೇವಕರನ್ನು ಹೀಗೆಯೇ ದೊಡ್ಡ ಗುಣದಿಂದ ನೋಡುತ್ತಾರೆ" ಎಂದಿತು.

ಸಿಂಹವು ಈ ಮಾತುಗಳನ್ನು ಕೇಳಿ ಸಂತೋಷದಿಂದ ಉಬ್ಬಿ ತನ್ನ ದಾರಿ ಹಿಡಿದು ಹೊರಟು ಹೋಯಿತು.

ತರುವಾಯ ಒಂದು ಹೆಬ್ಬುಲಿ ಆ ದಾರಿಯಾಗಿ ಬಂದಿತು. ಅದನ್ನು ನೋಡಿ ನರಿ ತನ್ನಲ್ಲಿ "ಒಬ್ಬ ಕ್ರೂರಾತ್ಮನಿಗೆ ಬಗ್ಗಿ ನಮಸ್ಕಾರ ಮಾಡಿ ತಪ್ಪಿಸಿಕೊಂಡೆನು. ಈ ಹೆಬ್ಬುಲಿಯನ್ನು ಹೇಗೆ ತೊಲಗಿಸಲಿ?

ಏನಾದರೂ ಹೇಳಿ ಇದಕ್ಕೂ ಸಿಂಹಕ್ಕೂ ಹಗೆ ಹಿಡಿಸುವುದೇ ಸರಿ." ಎಂದುಕೊಂಡಿತು.

ಹೀಗೆಂದುಕೊಂಡ ನರಿ ಹುಲಿಯ ಸಮೀಪಕ್ಕೆ ಹೋಗಿ, ಗುಟ್ಟೆಂಬಂತೆ ಪಿಸುದನಿಯಿಂದ, "ಮಾವಯ್ಯ, ಈ ಆನೇನ ಸಿಂಹವು ಕೊಂದಿತು. ಅದು ನನ್ನನ್ನು ಕಾವಲು ಕೂಡಿಸಿ ಸ್ನಾನಕ್ಕೆ ಹೋಗಿದೆ. ಹೋಗುವಾಗ ಅದು ನನ್ನ ಹತ್ತಿರ, ಈ ದಾರಿಯಾಗಿ ನನ್ನ ಹಗೆಗಾರ ಹೆಬ್ಬುಲಿ ಬಂದರೆ, ನೀನು ಗುಟ್ಟಾಗಿ ಬಂದು ನನಗೆ ಹೇಳು. ಅದು ಈ ಆನೇನ ತಿನ್ನುವಾಗಲೇ ಕೊಂದು ಬಿಡುತ್ತೇನೆ ಅಂದಿದೆ. ನಿನ್ನಂಥವನು ಹಾಗೆ ಸಾಯುವುದೆಂದರೇನು?" ಎಂದಿತು.

ಹೆಬ್ಬುಲಿ ಹೆದರಿ "ನನ್ನ ಪ್ರಾಣ ಕಾಪಾಡಿದೆಯಪ್ಪಾ!" ಎಂದು ಹೇಳಿ ಅತ್ಯಂತ ವೇಗವಾಗಿ ಅಲ್ಲಿಂದ ಓಡಿಹೋಯಿತು.

ಅದು ಹೋಯಿತೆಂಬಷ್ಟರಲ್ಲಿ ಒಂದು ಚಿರತೆ ಆ ಕಡೆಗೆ ಬಂದಿತು. ಅದನ್ನು ನೋಡಿ ನರಿ ತನ್ನೊಳಗೆ, "ಚಿರತೆಯ ಕೋರೆ ಹಲ್ಲುಗಳು ತುಂಬಾ ಹರಿತ. ಇದರಿಂದಲೇ ಈ ಆನೆಯ ಚರ್ಮವನ್ನು ಸೀಳಿಸುತ್ತೇನೆ" ಎಂದುಕೊಂಡು, ಚಿರತೆಯೊಂದಿಗೆ, "ಬಾರಯ್ಯ ಗೆಳೆಯಾ! ಈ ಆನೆಯನ್ನು ಸಿಂಹವು ಕೊಂದಿತು. ನನ್ನನ್ನು ಕಾವಲಿಗಿಟ್ಟು ಹೆಂಡತಿಯನ್ನು ಕರೆದುಕೊಂಡು ಬರಲು ಹೋಗಿದೆ. ಅದು ತಿರುಗಿ ಬರುವುದರೊಳಗೆ ನೀನು ಸ್ವಲ್ಪ ತಿಂದು ಓಡಿ ಹೋಗಿ ಬಿಡು. ಇಷ್ಟು ದೊಡ್ಡ ಆನೇನ ನೀನಿಷ್ಟು ತಿಂದರೆ ಅದಕ್ಕೇನೂ ಕಡಿಮೆ ಬೀಳದು" ಎಂದಿತು.

ಕೂಡಲೇ ಚಿರತೆ ಆನೆಯ ಮಾಂಸಕ್ಕಾಗಿ ಅದರ ಚರ್ಮವನ್ನು ಸೀಳಿತು. ಚರ್ಮ ಸೀಳಿದ ಮರುಕ್ಷಣವೇ ನರಿ, "ಓಡಯ್ಯಾ! ಓಡೋಡು! ಸಿಂಹ ಬರುತ್ತಾ ಇದೆ!" ಎಂದು ಕೂಗಿತು.

ಚಿರತೆ ಬೆದರಿಬಿದ್ದು ಹಾರಿ ಹಾರಿ ಓಟ ಕಿತ್ತಿತು. ನರಿ ಸಂತೋಷದಿಂದ ಆನೆಯ ಮಾಂಸವನ್ನು



ತಿನ್ನಲು ತೊಡಗಿದಾಗ, ಇನ್ನೊಂದು ನರಿ ಅತಿ ವೇಗವಾಗಿ ಬಂದು ಅದರ ಮೇಲೆಬಿತ್ತು. ಮೊದಲನೇ ನರಿ ರೋಷದಿಂದ ಅದರ ಮೇಲೆ ಕಲೆಬಿದ್ದು ಅದನ್ನು ಕೊಂದು ಹಾಕಿ, ಆ ಮೇಲೆ ಸಾವಕಾಶವಾಗಿ ಆನೆಯ ಮಾಂಸವನ್ನು ತಿಂದಿತು.

ಕೋತಿ ಮೊಸಳೆಗೆ ಈ ಕಥೆಯನ್ನು ಹೇಳಿ, "ಶತ್ರುವು ಆಕ್ರಮಿಸಿದನೆಂದೋ, ಆಪತ್ತು ಬಂತೆಂದೋ, ಹೊಟ್ಟೆಗಿಲ್ಲದೆ ಹೋಯಿತೆಂದೋ ಮತ್ತಾವುದಕ್ಕೋ ಸ್ವಂತ ಜಾಗವನ್ನು ಬಿಟ್ಟು ಹೋಗಲೇ ಬಾರದು. ದೇಶ ಬಿಟ್ಟು ಹೋದ ನಾಯಿಯ ಕಥೆಯನ್ನು ನೆನಪಿಟ್ಟುಕೋ" ಎಂದಿತು.

"ಅದೇನು ಕಥೆ?" ಎಂದು ಕೇಳಿತು ಮೊಸಳೆ. ಕೋತಿ ಆ ಕಥೆಯನ್ನೂ ಹೇಳಿತು:

### ದೇಶಬಿಟ್ಟು ಹೋದ ನಾಯಿಯ ಕಥೆ

ಒಂದು ಪಟ್ಟಣದಲ್ಲಿ ಚಿತ್ರಾಂಗವೆಂಬ ನಾಯಿ ಸುಖವಾಗಿದ್ದಿತು. ಯಾವ ಕೊರತೆಯೂ ಅದಕ್ಕಿರ

ಲಿಲ್ಲ. ಹೀಗಿರುವಾಗ ಕೆಲವು ವರ್ಷಗಳ ನಂತರ ಆ ಪಟ್ಟಣಕ್ಕೆ ಬರಗಾಲದ ಕಷ್ಟಬಂತು. ಅದು ಸಾಲದೆಂದು ಶತ್ರುಗಳ ಭಯವೂ ಉಂಟಾಯಿತು. ಚಿತ್ರಾಂಗನಾಯಿಗೆ ಆಹಾರ ಸಿಕ್ಕದಾಯಿತು. ಇನ್ನು ಈ ಪಟ್ಟಣ ಪ್ರಯೋಜನ ವಿಲ್ಲವೆಂದುಕೊಂಡು ಸುಖವಾಗಿ ಬದುಕಲು ಇನ್ನೊಂದು ಪಟ್ಟಣಕ್ಕೆ ಹೋಯಿತು.

ಅಲ್ಲಿ ದೊಡ್ಡದೊಂದು ಮನೆಯಲ್ಲಿ ಅಡಿಗೇ ಕೋಣೆಯ ಬಾಗಿಲು ತೆರೆದಿರುವುದನ್ನು ಅದು ನೋಡಿತು. ಹತ್ತಿರ ಹೋಗಿ ಹಣಿಕೆ ನೋಡಿದಾಗ, ಒಳಗೆ ಅನೇಕ ಪಾಕಪದಾರ್ಥಗಳು ತಿನ್ನಲು ಸಿದ್ಧವಾಗಿರುವುದು ಕಂಡಿತು. ಅದು ಒಳಗೆ ಹೊಕ್ಕು ಹೊಟ್ಟೆ ತುಂಬಾ ತಿಂದು ಯಾರೂ ಕಾಣದಂತೆ ಹೊರಗೆ ಹೋಯಿತು.

ಆದರೆ ಅದು ಹೊರಗೆಬಂದ ಕೂಡಲೇ ಊರೊಳಗಿನ ನಾಯಿಗಳು ಈ ಹೊಸ ನಾಯಿಯನ್ನು ನೋಡಿ ನಾಲ್ಕೂ ಕಡೆಗಳಿಂದ ಓಡಿಬಂದು ಅದನ್ನು ಮುತ್ತಿ ಕಚ್ಚಿ ಏಳಲಾಗದಂತೆ ಮಾಡಿದುವು. ಆಗ ಆ ನಾಯಿ ತನ್ನೊಳಗೆ. "ಎಂಥಾ ಹೀನ ಸ್ಥಿತಿ ಬಂದರೂ ಇದ್ದ ಊರಲ್ಲಿರುವುದೇ ಮೇಲು. ತಿನ್ನಲು ಇದ್ದರೂ ಇಲ್ಲದಿದ್ದರೂ ಬಂಧುಗಳ ಸ್ನೇಹಿತರ ಆದರವಾದರೂ ಇರುತ್ತದೆ. ಪರಸ್ಥಳದಲ್ಲಿ ಬೇರೆ ನಾಯಿಗಳ ದ್ವೇಷದ ಹೊರತು ಮತ್ತೇನೂ ಇಲ್ಲ." ಎಂದು ಕೊಂಡಿತು.

ಆ ಮೇಲೆ ಅದು ತನ್ನ ಮೊದಲಿದ್ದ ಸ್ಥಳಕ್ಕೇ ಹಿಂದಿರುಗಿ ಬಂತು. ಆದನ್ನು ನೋಡಿ ಗೆಳೆಯ ನಾಯಿಗಳು, "ಪರವೂರಿಗೆ ಹೋದೆಯಲ್ಲಾ ? ಅಲ್ಲಿ ಹೇಗಿದ್ದಿತು ?" ಎಂದು ಕೇಳಿದುವು.

"ಅಲ್ಲಿ ಬೇಕಾದ ಹಾಗೆ ಬಗೆ ಬಗೆಯ ತಿಂಡಿಗಳೆಲ್ಲಾ ಇವೆ. ತುಂಬಾ ರುಚಿಯಾಗಿಯೂ ಇವೆ. ಆದರೆ ಆ ಊರಿನ ನಾಯಿಗಳಲ್ಲಿ ಸ್ನೇಹಭಾವವೆಂಬುದು ಲವಲೇಶವೂ ಇಲ್ಲ. ಆತ್ಮಾಭಿಮಾನವಿರುವ ಈ ಈ ಊರ ನಾಯಿಗಳು ಅಲ್ಲಿ ಇರಲಿಕ್ಕೇ ಇಲ್ಲ." ಎಂದಿತು ಚಿತ್ರಾಂಗ ನಾಯಿ.

ಕೋತಿ ಈ ಕಥೆಯನ್ನು ಹೇಳಿ ಮೊಸಳೆಯೊಂದಿಗೆ, "ಗೊತ್ತಾಯಿತಪ್ಪೆ ? ಈಗ ನೀನು ಮನೆಗೆ ಹೋಗಿ ನಿನ್ನ ಶತ್ರುವಿನೊಂದಿಗೆ ವೀರತನ ತೋರಿಸಿ ಹೋರಾಡಿ ಕೊಲ್ಲು. ಆ ಮೇಲೆ ನಿನ್ನ ಪಾಡಿಗೆ ಅಲ್ಲಿ ಸುಖವಾಗಿರು. ಸುಮ್ಮನೆ ನನ್ನ ಗೋಜಿಗೆ ಮಾತ್ರ ಬರಬೇಡ. ಒಳ್ಳೇಯವನಾಗಿ ದೂರವೇ ಇರು. ಹೋಗು" ಎಂದಿತು.

ಈಗ ಮೊಸಳೆಗೆ ಎಷ್ಟೋ ನೆಮ್ಮದಿಯೆನಿಸಿತು. ದೃಢ ಚಿತ್ತದಿಂದ ನೀರಿಗೆ ಹಾರಿ ಹೋಗಿ, ಶತ್ರುವಿನೊಂದಿಗೆ ಭಯಂಕರವಾಗಿ ಹೋರಾಡಿ ಅದನ್ನು ಕೊಂದಿತು. ಹೀಗೆ ತನ್ನ ಮನೆಯನ್ನು ಸ್ವಾಧೀನಪಡಿಸಿಕೊಂಡು ಸುಖವಾಗಿದ್ದಿತು.





# ವಾಮನರು

ಪ್ರತಿಸಾರಿಯೂ ಬೇತಾಳದಂಥ ಅಮಾನುಷ್ಯ ಭಾರವನ್ನು ಹೊರುವ ಶಕ್ತಿ ಸ್ವಲ್ಪವೂ ಕುಂದದ ರಾಜಾ ತ್ರಿವಿಕ್ರಮನು, ಮತ್ತೆ ಮರದಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜಸ್ಕಂಧದ ಮೇಲೆ ಹೊತ್ತುಕೊಂಡು ಮತ್ತೆ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಯಾರನ್ನು ಉದ್ಧರಿಸಬೇಕೆಂದು ಹೀಗೆ ಕಷ್ಟಪಡುವಿಯೋ ತಿಳಿಯಲಿಲ್ಲ. ಕೆಲವರು ಅಭಿವೃದ್ಧಿಗೆ ಬರಲು ಒಂದಿಷ್ಟೂ ಇಷ್ಟಪಡುವವರಲ್ಲ. ತಮ್ಮನ್ನು ಉದ್ಧರಿಸಲು ಪ್ರಯತ್ನಿಸುವವರನ್ನು ಕೂಡಾ ಶತ್ರುಗಳೆಂದು ಭಾವಿಸುತ್ತಾರೆ. ಇದಕ್ಕೆ ನಿದರ್ಶನವಾಗಿ ವಾಮನರೆಂಬ ಆಟವಿಕ ಜಾತಿಯವರದೊಂದು ಕಥೆ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆಯನ್ನು ಹೇಳಲು ತೊಡಗಿತು:

ಆ ವಾಮನರು ಹಿಮಗಿರಿ ಪ್ರಾಂತದ ಅರಣ್ಯದಲ್ಲಿ ವಾಸಮಾಡಿಕೊಂಡಿದ್ದರು. ಅವರ ಜೀವಿತ ವಿಧಾನವು ಅರಣ್ಯಕ್ಕೆ ಸಂಬಂಧಿಸಿದ ವಸ್ತುಗಳ ಮೇಲೆಯೇ

ಬೇತಾಳ ಕಥೆಗಳು?...

ಹೊಂದಿಕೊಂಡಿದ್ದಿತು. ಅರಣ್ಯದಲ್ಲಿ ಸಿಗುವ ವಸ್ತುಗಳೆಲ್ಲ ಅವರಿಗೆ ಅಗತ್ಯವಾಗಿದ್ದುವು. ಬೇರೆ ವಸ್ತುಗಳ ಗೊಡವೆ ಅವರಿಗಿಲ್ಲ. ನಾಗರಿಕತೆ ಎಂದರೇನೆಂದು ಕೂಡ ಅವರಿಗೆ ಗೊತ್ತಿಲ್ಲ.

ಅವರಿಗೆ ಒಬ್ಬ ನಾಯಕನೂ ಇದ್ದ. ಅವನ ಹೆಸರು ಹುಲಿದೊರೆ. ಆ ನಾಯಕನ ಮಗನ ಹೆಸರು ಗೊಂಡಪ್ಪನೆಂದು. ಅವನೊಮ್ಮೆ ನಾಗರಿಕತೆಯ ದೇಶವನ್ನು ಕುರಿತು ಯಾರೋ ಹೇಳುವುದನ್ನು ಕೇಳಿದ್ದನು. ಅರಣ್ಯಕ್ಕೆ ತುಸು ದೂರದಲ್ಲಿ ವಿಜಯಪುರಿ ಎಂಬ ರಾಜ್ಯವಿದ್ದಿತು. ನಾಗರಿಕತೆಯನ್ನು ತಿಳಿದುಕೊಳ್ಳಲಿಕ್ಕಾಗಿ ಗೊಂಡಪ್ಪನು ಗುಟ್ಟಾಗಿ ವಿಜಯಪುರಿಗೆ ಹೋಗಿ, ಉಪಾಯವಾಗಿ ರಾಜನ ಹತ್ತಿರ ಒಂದು ಕೆಲಸಕ್ಕೂ ಸೇರಿದನು. ನಾಗರಿಕತೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅಂತಹುದೇ ಜೀವಿತ ಕೈಕೊಳ್ಳಬೇಕೆಂಬುದು ಅವನ ಅಭಿಲಾಷೆ. ಇದಕ್ಕೆ ತಂದೆಯ ಅನುಮತಿ ದೊರೆಯದೆಂದುಕೊಂಡು, ಯಾರಿಗೂ ಹೇಳದೆಯೇ ಹೊರಟು ಹೋಗಿದ್ದನು.

ಕಾಲಕ್ರಮದಲ್ಲಿ ಗೊಂಡಪ್ಪನಿಗೆ ತಂದೆಯನ್ನು ನೋಡಬೇಕೆಂದು ತೋರಿತು. ನಾಗರಿಕತೆಯೂ ಅವನಿಗೆ ಅರ್ಥವಾಗಿತ್ತು. ಇದನ್ನು ತನ್ನ ಜಾತಿಯವರಲ್ಲಿ ಪ್ರವೇಶಗೊಳಿಸಿ ಅವರನ್ನು ಅಭಿವೃದ್ಧಿಗೇರಿಸಬಹುದೆಂದುಕೊಂಡು. ಅಲ್ಲಿಂದ ತನ್ನ ಮನೆಗೆ ಹಿಂದಿರುಗಿ ಬಂದನು.

ಮಗನು ತನ್ನೊಂದಿಗೆ ಹೇಳದೆ ಕೇಳದೆ ಹೊರಟು ಹೋದಂದಿನಿಂದ ನಾಯಕ ಹುಲಿದೊರೆ ಚಿಂತೆಯಿಂದ ನಿರ್ವಿಣ್ಣನಾಗಿದ್ದನು. ತನ್ನ ಭವಿಷ್ಯತ್ತೆಲ್ಲವೂ ಮುಗುಚಿ ಹೋಯಿತೆಂಬ ಬೇಗುದಿಯಲ್ಲಿ ವ್ಯಾಧಿಗ್ರಸ್ಥನಾಗಿ ಮಂಚ ಹಿಡಿದಿದ್ದನು. ಆಕಸ್ಮಾತ್ ಹಿಂದಿರುಗಿ ಬಂದ ಮಗನನ್ನು ನೋಡಿದ ಕೂಡಲೇ ಅವನಿಗೆ ಜೀವ ಬಂದಂತಾಯಿತು. "ಅಪ್ಪಾ, ಮಗನೇ. ನನ್ನ ಅನಂತರ ಇನ್ನು ನೀನೇ ವಾಮನರ ನಾಯಕನಾಗಿರಪ್ಪಾ!" ಎಂದು ಹೇಳಿ ಮಗನ ಬೆನ್ನು ತಟ್ಟುತ್ತಾ ಜೋಲಿಬಿದ್ದು ಥಕ್ಕನೆ ಪ್ರಾಣ ಬಿಟ್ಟನು ಹುಲಿದೊರೆ. ವಾಮನ ಜಾತಿಯವರು ತಮ್ಮ ಹಿರಿಯ



ನಾಯಕನ ಆಶೆಗಳನ್ನು ನೆರವೇರಿಸಲು ಬದ್ಧಕಂಕಣರಾಗಿ, ಗೊಂಡಪ್ಪನನ್ನು ತಮ್ಮ ಹೊಸ ನಾಯಕನನ್ನಾಗಿ ಸ್ವೀಕರಿಸಿಕೊಂಡರು.

ಹೀಗೆ ಗೊಂಡಪ್ಪ ದೊರೆ ನಾಯಕನಾದ ಕೂಡಲೇ, ಅರಣ್ಯವನ್ನೆಲ್ಲಾ ಕಡಿದು ಹಾಕಲು ಅಪ್ಪಣೆ ಮಾಡಿದನು. ವಾಮನರಿಗೆ ಈ ಅಪ್ಪಣೆ ಉನ್ಮಾದಕರವಾಗಿ ತೋರಿತು. ಆದರೂ ಏನೂ ಇದಿರಾಡದೆ ನಾಯಕನ ಆಜ್ಞೆಯನ್ನು ಶಿರಸಾವಹಿಸಿ ಅರಣ್ಯವನ್ನೆಲ್ಲ ಕಡಿದು ಹಾಕಿದರು.

ಹಾಗೆ ಕಡಿಯಲ್ಪಟ್ಟ ಮರದ ದಿಮ್ಮಿಗಳನ್ನೂ ಇತರ ವಸ್ತುಗಳನ್ನೂ ವಿಜಯಪುರಕ್ಕೆ ಕಳುಹಿಸಿ ಮಾರಾಟ ಮಾಡಿಸಿದನು. ಹಾಗೆ ಬಂದ ಹಣದಿಂದ ಅರಣ್ಯ ಪ್ರದೇಶದಲ್ಲಿ ಆಧುನಿಕ ಮನೆಗಳನ್ನೂ, ಬೀದಿ ಮುಂತಾದ ಇತರ ನಾಗರಿಕ ಸೌಕರ್ಯಗಳನ್ನೂ ಮಾಡಿಸಲು ತೊಡಗಿ, ಮೊದಲಿದ್ದ ವಾಮನರ ಕೇರಿ ಮನೆಗಳನ್ನು ನಾಶಪಡಿಸಿದನು. ಹಿಮಗಿರಿ ಅರಣ್ಯ ಪ್ರಾಂತವು ಹಿಮಪುರಿಯಾಗಿ ಬದಲಾವಣೆ ಹೊಂದಿತು.

ಗೊಂಡಪ್ಪ ದೊರೆ ತನ್ನ ಪ್ರಜೆಗಳಿಗೆ, ವಿಜಯಪುರಿಗೆ ಹೋಗಿ ನಾಗರಿಕ ವೃತ್ತಿಗಳನ್ನು ಹಿಡಿದು ಹಣ ಸಂಪಾದನೆ ಮಾಡಬೇಕೆಂದು ಅಪ್ಪಣೆ ಮಾಡಿದನು.

ವಾಮನರು ಬೇಕೂ ಬೇಡದವರಂತೆ ಅವನ ಅಪ್ಪಣೆಯನ್ನು ಪಾಲಿಸಲು ಪ್ರಯತ್ನಪಟ್ಟರು. ಆದರೆ ಅವರಿಗೆ ಅದೇನೂ ಹಿಡಿಸಲಿಲ್ಲ. ಹಿಂದೆ ತಾವೆಲ್ಲ ಉಪಯೋಗ ಪಡಿಸಿದ ವಸ್ತುಗಳು ಈಗ ಸಿಗಲಿಲ್ಲ. ಸಿಕ್ಕುವ ಪ್ರತಿ ವಸ್ತುವಿಗೂ ಹೆಚ್ಚು ಬೆಲೆ ಕೊಡಬೇಕಾಯಿತು. ವಾಮನರಿಗೆ ಇಷ್ಟವಾದ ಅರಣ್ಯ ಪದಾರ್ಥಗಳು ಹಣಕೊಟ್ಟರೂ ಸಿಕ್ಕದ ಪರಿಸ್ಥಿತಿ ಉಂಟಾಗಿತ್ತು. ಅರಣ್ಯದೊಂದಿಗೆ ಅವೆಲ್ಲವೂ ನಾಶವಾಗಿ ಹೋಗಿದ್ದುವು. ಉಪವಾಸವೆಂದರೇನೆಂಬುದೇ ತಿಳಿಯದ ಜಾತಿಯವರಿಗೆ ಈಗ ಅದನ್ನು ಅನುಭವಿಸುವ ಪರಿಸ್ಥಿತಿ ಬಂತು.

ಹೀಗಾದಾಗ ವಾಮನರೊಳಗೆ ಮಲ್ಲನೆಂಬುವನೊಬ್ಬ ಗೊಂಡಪ್ಪದೊರೆಗೆ ವ್ಯತಿರೇಕವಾಗಿ ವಾಮನರನ್ನು ಕೆರಳಿಸ ತೊಡಗಿದನು. ಅವನ ಗುಂಪು





ದೊಡ್ಡದಾಗುವುದನ್ನು ನೋಡಿ ಗೊಂಡಪ್ಪದೊರೆ ಹೆದರಿ, ಆಟವಿಕರಿಗೆ ಅಗತ್ಯವಾದ ಅರಣ್ಯ ವಸ್ತು ಪದಾರ್ಥಗಳನ್ನು, ವಿಜಯಪುರಿಯ ರಾಜನ ಸಹಾಯದಿಂದ ತರಿಸಿ, ಹಿಮಪುರಿಯ ಅಂಗಡಿಗಳಲ್ಲಿ ವ್ಯಾಪಾರಮಾಡಿಸಲು ತೊಡಗಿದನು. ಆದರೆ ಅವು ಎಲ್ಲರಿಗೂ ಸಾಕಾಗುವಷ್ಟು ದೊರೆಯಲಿಲ್ಲ. ಅದನ್ನು ಕೊಂಡುಕೊಳ್ಳುವಲ್ಲಿ ಜನರ ನುಗ್ಗಾಟ ಹೆಚ್ಚಾಗ ತೊಡಗಿತು. ಅಷ್ಟಾದರೂ ಕೆಲವರಿಗೆ ಅವು ಸಿಗಲಿಲ್ಲ.

ಇದನ್ನು ಕುರಿತು ಮಲ್ಲನು ಗೊಂಡಪ್ಪ ದೊರೆಯೊಂದಿಗೆ ಆಕ್ಷೇಪಣೆ ಎತ್ತಿದನು. ಅದರ ನಿವಾರಣೆಗಾಗಿ ಗೊಂಡಪ್ಪ ದೊರೆ ಒಂದು ವಿಚಿತ್ರವಾದ ಏರ್ಪಾಡು ಮಾಡಿದನು. ಮಿತವಾಗಿರುವ ಅರಣ್ಯ ಪದಾರ್ಥಗಳನ್ನು ತಲಾ ಇಷ್ಟಿಷ್ಟರಂತೆ ಹಂಚಿ ಕೊಡಿಸಲು ಪ್ರಾರಂಭಿಸಿದನು. ಹಾಗೆ ಹಂಚಿಕೆಯಲ್ಲಿ ಪಡೆಯುವ ವಸ್ತು ಯಾರಿಗೂ ಯಾವುದಕ್ಕೂ ಸಾಕಾಗದೆ, ತಗಾದೆ ಹೆಚ್ಚೇ ಆಯಿತು.

ಈ ಸಂದರ್ಭದಲ್ಲಿ ಮಲ್ಲನಿಗೆ ಒಂದು ಅನುಮಾನವಾಯಿತು. ತಮ್ಮ ಅರಣ್ಯವೆಲ್ಲಾ ಧ್ವಂಸವಾಗಿ ಹೋಗಿರುವಾಗ. ಅರಣ್ಯದ ವಸ್ತುಗಳೂ ನಾಶವಾಗಿ ಹೋದುವಷ್ಟೆ? ಹಾಗಿರುವಾಗ ಈಗ ದೊರೆಯುವ ಈ ಅಡವಿಯ ವಸ್ತುಗಳು ಎಲ್ಲಿಂದ ಬರುತ್ತವೆ? ಈ ವಿಷಯವನ್ನು ಶೋಧಿಸತೊಡಗಿದನು. ಆ ವಸ್ತುಗಳನ್ನು ವಿಜಯಪುರಿಯ ರಾಜನು ಕಳುಹಿಸುತ್ತಿದ್ದಾನೆಂದು ತಿಳಿಯಿತು. ಅವನಿಗೆ ಅವು ವಿಜಯಪುರಿಯಲ್ಲಿ ದೊರಕುವ ವಸ್ತುಗಳಲ್ಲವೆಂತಲೂ, ವಿಜಯಪುರಿಯ ಸಮೀಪದಲ್ಲಿರುವ ಮಂದರಗಿರಿಯ ಕಾಡುಗಳಿಂದ ತರಿಸುತ್ತಾನೆಂತಲೂ ಮಲ್ಲನು ತಿಳಿದುಕೊಂಡನು.

ಇದು ತಿಳಿದಕೂಡಲೇ ಮಲ್ಲನು ಹಿಮಪುರಿಯ ವಾಮನರನ್ನೆಲ್ಲಾ ಮಂದರಗಿರಿಯ ಅರಣ್ಯಕ್ಕೆ ಹೊರಡಿಸಿಕೊಂಡು ಹೋದನು. ವಾಮನರೆಲ್ಲ ಮಲ್ಲ ದೊರೆಯನ್ನೇ ತಮ್ಮ ನಾಯಕನೆಂದು ಹೇಳಿಕೊಂಡು ಮಂದರಗಿರಿಯ ಅರಣ್ಯದಲ್ಲಿ ತಮ್ಮ ನಿವಾಸಗಳನ್ನು ಏರ್ಪಡಿಸಿಕೊಂಡರು, ಅವರಿಗೆಲ್ಲ ಅದೇ ಸೊಗಸೆನಿಸಿತು.

ತಾನು ನಾಗರಿಕವನ್ನಾಗಿ ಮಾಡಿದ ಹಿಮಗಿರಿ ಹಾಗೂ ಇಲ್ಲ ಹೀಗೂ ಅಲ್ಲದಂತೆ ಹಾಳಾಗಿ ಹೋಗಿ, ತಾನು ಏಕಾಂಗಿಯಾದುದನ್ನು ನೆನೆದು ಗೊಂಡಪ್ಪ ದೊರೆ, ತನ್ನನ್ನು ಬಿಟ್ಟುಹೋಗುವ ವಾಮನರನ್ನು ನೋಡಿ, "ನಾನೂ ಮಲ್ಲ ದೊರೆಯ ಕೈ ಕೆಳಗಿನವನಾಗಿ ನಿಮ್ಮೊಂದಿಗಿರುತ್ತೇನೆ." ಎಂದನು. ಅದಕ್ಕೆ ವಾಮನರು "ಬೇಡ ಬೇಡ. ನೀನು ನಮ್ಮೊಂದಿಗಿರ ತಕ್ಕವನೇ ಅಲ್ಲ" ಎಂದು ನಿರಾಕರಿಸಿಬಿಟ್ಟರು.

ಬೇತಾಳವು ಇಷ್ಟು ಕಥೆ ಹೇಳಿ, "ಗೊಂಡಪ್ಪ ದೊರೆ ವಾಮನರಿಗೆ ಅಷ್ಟೆಲ್ಲ ಕಷ್ಟಗಳನ್ನು ಕೊಟ್ಟನಷ್ಟೆ? ವಾಮನರ ಕಾಡು ಜೀವನ ವಿಧಾನ ಅವನಿಗೆ ಹಿಡಿಸದಿದ್ದುದರಿಂದ ತಾನೇ ಅವನು ಎಲ್ಲರನ್ನೂ ನಾಗರಿಕರನ್ನಾಗಿ ಮಾಡಲು ನೋಡಿದ? ವಾಮನರ

ಕಾಡು ಜೀವನದ ಮೇಲೆ ಅವನಿಗೆ ಅಸಹ್ಯ ಹುಟ್ಟಿದ ಹಾಗೆ ವಾಮನರ ಜಾತಿಯ ಮೇಲೆ ಅಸಹ್ಯ ಹುಟ್ಟಿದೆಯೋ ಇಲ್ಲವೋ ? ವಾಮನರಾದರೂ ಕಾಡು ಜೀವಿತವನ್ನು ಬಿಟ್ಟುಕೊಟ್ಟು ನಾಗರಿಕತೆಯಲ್ಲಿ ಪಳಗಲು ನಿರಾಕರಿಸಿಬಿಟ್ಟರಲ್ಲ, ಅದೇಕೆ ? ಎಷ್ಟಾದರೂ ನಾಗರಿಕತೆ ಒಂದು ಮೆಟ್ಟಿಲು ಹೆಚ್ಚಿನದೇ ತಾನೇ ? ತಮ್ಮನ್ನು ನಾಗರಿಕರನ್ನಾಗಿ ಮಾಡಲೆಳಸಿದ ಗೊಂಡಪ್ಪ ದೊರೆಯ ಮೇಲೆ ಯಾರಿಗೂ ಕೃತಜ್ಞತೆ ಕೂಡಾ ಇಲ್ಲದೆ, ಅವನನ್ನು ಎಲ್ಲರೂ ಬಹಿಷ್ಕರಿಸಿಯೇ ಬಿಟ್ಟರಲ್ಲಾ ? ಅದೇಕೆ ? ಈ ಸಂದೇಹಗಳಿಗೆ ಸಮಾಧಾನ ತಿಳಿದು ಕೂಡಾ ಹೇಳದೆಹೋದರೆ ನಿನ್ನ ತಲೆ ಯೊಡೆದು ಹೋಳು ಹೋಳಾಗುತ್ತದೆ" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಗೊಂಡಪ್ಪ ದೊರೆ ವಿಜಯಪುರಿಯ ನಾಗರಿಕತೆ ಉನ್ನತ ಸಂಸ್ಕಾರವೆಂದು ತನಗೆ ತಾನೇ ನಿರ್ಧರಿಸಿಕೊಳ್ಳಲು, ತಾನು ನಾಯಕನ ಮಗನೆಂಬ ಅಹಂಕಾರವೇ ಕಾರಣವಾಯಿತು. ಅದನ್ನು ಆಚರಣೆಗೆ ತರುವಾಗ ಒಂದೊಂದೇ ಪೆಟ್ಟು ತಗಲಿ ಗರ್ವಹೋಯಿತು. ಕಟ್ಟಕಡೆಗೆ ಅವನು ಮಲ್ಲ ದೊರೆಯನ್ನೇ ನಾಯಕನೆಂದು ಒಪ್ಪಿ ಅವರೊಂದಿಗೆ ಹೋಗಲು ನೆನೆಸಿದಾಗ, ಅವನಿಗೆ ಸ್ವಜಾತಿಯ ಮೇಲೆ ಎಷ್ಟು ಅಭಿಮಾನವಿರುವುದೆಂಬುದು ಸ್ಪಷ್ಟವಾಗುತ್ತದೆ. ಆದರೆ ವಾಮನರು ಅವನನ್ನು ಬಹಿಷ್ಕರಿಸಿಬಿಟ್ಟರು. ಅದು ಅವನಿಗೆ ದೊಡ್ಡ ಶಿಕ್ಷೆಯೆಂದು ವಾಮನರು ಭಾವಿಸಿದರೂ ಗೊಂಡಪ್ಪ ದೊರೆಗೆ ದೊಡ್ಡ ಶಿಕ್ಷೆಯೆನಿಸಲಿಲ್ಲ. ಏಕೆಂದರೆ ಅವನು ಸಂಸ್ಕಾರಗೊಂಡ ರೀತಿಯಲ್ಲಿ ವಾಮನರಿಂದ ಎಂದೋ ಬಹಿಷ್ಕೃತನಾಗಿದ್ದ. ಅವನು ಬೇಕಾದರೆ ಹೋಗಿ ನಾಗರಿಕ ಜೀವನದಲ್ಲಿ ನೆಮ್ಮದಿಯಾಗಿರಲೂ ಸಾಧ್ಯವಿದೆ. ಆದರೆ ವಾಮನರು ನಾಗರಿಕ ಜೀವನವನ್ನು ನಿರಾಕರಿಸಲು ಕಾರಣವಿದೆ. ಅವರ ಅಗತ್ಯ ವಸ್ತುಗಳು, ಆಚಾರಗಳು, ನಂಬಿಕೆಗಳು ಮುಂತಾದುವು ನಾಗರಿಕತೆಗೆ ಅನುಕೂಲವಾದಂಥವಲ್ಲ. ಅರಣ್ಯ ಜೀವನವು ಅವರಿಗೆ ಪೂರ್ತಿ ಸಂತೃಪ್ತಿಯನ್ನು ಕೊಡುವವರೆಗೂ ಅದರಲ್ಲಿ ರವಷ್ಟು ಕೂಡ ಬದಲಾವಣೆ ಯಾಗುವುದನ್ನು ಅವರು ಸಹಿಸಲಾರರು. ಈ ಸಂಗತಿಗಳನ್ನೆಲ್ಲಾ ಆಲೋಚನೆ ಮಾಡದೆ, ತನ್ನಲ್ಲಿ ಉಂಟಾದ ಭಾವ ಪರಿವರ್ತನೆ ಕೂಡಾ ತನಗಾದರೂ ಹಿಡಿಸಿತೋ ಇಲ್ಲವೋ ಎಂಬುದನ್ನೂ ನೋಡದೆ ಗೊಂಡಪ್ಪ ದೊರೆ ವಾಮನರಿಗೆ ಕಷ್ಟಗಳನ್ನು ಉಂಟು ಮಾಡಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದಕೊಂಬೆಯನ್ನು ಸೇರಿತು.



# ಔತಣ

ಪಾಂಡುರಂಗಯ್ಯನವರು ಮಹಾಲೋಭಿ ಎಂದು ಪ್ರಸಿದ್ಧರಾದ ಧನಿಕರು. ಅವರಿಗೆ ತಮಾಷೆ ಮಾಡಲಿಕ್ಕಾಗಿ, "ಅವರು ಊರವರಿಗೆಲ್ಲಾ ಭಾರಿ ಔತಣದೂಟ ಹಾಕುತ್ತಾರಂತೆ. ಅದಕ್ಕಾಗಿ ಸನ್ನಾಹ ನಡೆಯುತ್ತಾ ಇದೆ" ಎಂದು ಯಾರೋ ಯಾರೊಂದಿಗೋ ಹೇಳಿದರು.

ಪಾಂಡುರಂಗಯ್ಯನ ಸಂಗತಿ ಗೊತ್ತಿದ್ದ ಯಾರಿಗೂ ಆ ಮಾತು ನಂಬುವುದೇ ಕಷ್ಟವಾಯಿತು.

ರಂಗನಿಗೆ ಔತಣವೆಂದರೆ ಬಹಳ ಇಷ್ಟ. ತಾನು ಕೇಳಿದ ಸುದ್ದಿ ನಿಜವೋ, ನಿಜವಾದರೆ ಯಾವಾಗ ಏನೆಂಬ ವಿವರಗಳನ್ನು ತಿಳಿಯಬೇಕೆಂದುಕೊಂಡು, ಅವನು ಪಾಂಡುರಂಗಯ್ಯನ ಮನೆಗೆ ಹೋಗಿ ನೌಕರನೊಂದಿಗೆ, "ಏನಪ್ಪ, ನಿನ್ನ ಯಜಮಾನರು ಊರವರಿಗೆ ಔತಣ ಮಾಡುತ್ತಾರಂತಲ್ಲಾ ? ನಿಜವೇ ? ಯಾವಾಗ ?" ಎಂದು ಕೇಳಿದನು.

ಅದಕ್ಕೆ ನೌಕರನು, "ಹೌದು, ಔತಣ ಹಾಕುವುದು ನಿಜವೇ. ಆದರೆ ಈಗ ಅಲ್ಲ. ಪ್ರಳಯ ಬರುವದಿನ ಖಂಡಿತಾ ಔತಣ ನಡೆಯುತ್ತದೆ" ಎಂದನು.

ಆಗಲೇ ಮನೆಯೊಳಗಿಂದ ಹೊರಗೆ ಬಂದ ಪಾಂಡುರಂಗಯ್ಯ "ಔತಣದ ದಿನ ನಿಶ್ಚಯ ಮಾಡಲು ಈಗಲೇ ಏನು ಅವಸರ ಬಂತೋ ನಿನಗೆ ?" ಎಂದು ನೌಕರನ ಮೇಲೆ ರೇಗಿಕೊಂಡರು.





# ಮಾಯಾವರ್ತಕ

ಒಂದು ಊರಿನಲ್ಲಿ ಅಚ್ಯುತಾನಂತ ಎಂಬವರು ಸಾಕಷ್ಟು ಹಣ ಸಂಪಾದನೆ ಮಾಡುತ್ತಿದ್ದರೂ ಬಿಡಾರದ ಮನೆಯಲ್ಲೇ ಇದ್ದರು. ಸ್ವಂತ ಮನೆ ಕೊಂಡುಕೊಳ್ಳ ಬೇಕೆಂದು ಹೇಳಿಕೊಂಡೇ, ಅಗ್ಗದ ಬೆಲೆಗೆ ಯಾರು ಮನೆಯನ್ನು ಮಾರುವರೋ, ಎಂದು ಕಾಯುವಿಕೆ ಯಲ್ಲೇ ವರ್ಷದ ಮೇಲೆ ವರ್ಷ ಕಳೆಯುತ್ತಿದ್ದಿತು.

"ನಿಮ್ಮ ಈ ಜಿಪುಣ ಬುದ್ಧಿಯಿಂದಾಗಿ ನಮಗೆ ಸ್ವಂತ ಮನೆ ಮಾಡಿಕೊಳ್ಳುವ ಯೋಗ್ಯತೆಯೇ ಇಲ್ಲ. ಎಲ್ಲಿಯಾದರೂ ಅಂಗೈಯಷ್ಟು ಜಾಗವನ್ನಾದರೂ ಕೊಂಡುಕೊಳ್ಳಿ. ಒಂದು ಸಣ್ಣ ಗುಡಿಸಲನ್ನಾದರೂ ಹಾಕ್ಕೊಳ್ಳೋಣ" ಎಂದಳು ಅವರ ಹೆಂಡತಿ.

ಕಡೆಗೆ ಎರಡು ಗ್ರಾಮಗಳಾಚೆಗಿನ ಊರಿನಲ್ಲಿ ಒಂದು ಮನೆ ಕಡಿಮೆ ಬೆಲೆಗೇ ಸಿಗುವ ಹಾಗೆ ಕುದುರಿತು. ಆ ಮನೆಯ ಯಜಮಾನನು ವ್ಯಾಪಾರದ ನಿಮಿತ್ತ ದೇಶಾಂತರಕ್ಕೆ ಹೊರಡುವ ಮೊದಲು, ಚಿಕ್ಕದಾದರೂ ಚೊಕ್ಕ ರಾಜಭವನದಂತಹ ಮನೆ ಯನ್ನು ಅಚ್ಯುತಾನಂತರು ಕೊಟ್ಟ ಹಣಕ್ಕೇ ಮಾರಿ, ಬೀಗದಕೈಯನ್ನು ಕೊಟ್ಟು ಹೊರಟು ಹೋದನು. ಅಚ್ಯುತಾನಂತರು ತಾನು ಕೊಂಡುಕೊಂಡ ಮನೆಗೆ ಗೃಹಪ್ರವೇಶ ನಡೆಯಿಸುವ ಏರ್ಪಾಡು ಮಾಡಲು ಎರಡು ದಿನಗಳ ಮೊದಲು ಅಲ್ಲಿಗೆ ಹೋದರು. ಆಗ ಅಲ್ಲಿ ನಾಲ್ಕು ಮಂದಿ ತಮ್ಮೊಳಗೆ ಏನೋ ತಗಾದೆ ನಡೆಸಿಕೊಂಡಿದ್ದರು. ಅವರೆಲ್ಲರೂ ಆ ಮನೆಯನ್ನು ಕೊಂಡುಕೊಂಡವರೇ ಅಂತೆ. ಅಚ್ಯುತಾನಂತರು ಐದನೇಯವರು!

ಅಷ್ಟರಲ್ಲಿ ಆ ಮನೆಯ ಮುಂದೆ ಒಂದು ಕುದುರೇ ಗಾಡಿ ಬಂದು ನಿಂತಿತು. ಒಬ್ಬ ಜಮೀನ್ದಾರನು ಕೆಳಗಿಳಿದು, ಜಗಳವಾಡಿಕೊಂಡಿದ್ದವರನ್ನು ನೋಡಿ, "ನನ್ನ ಮನೆಯ ಮುಂದೆ ನಿಮಗೇನು ಕೆಲಸ ?" ಎಂದನು ಕೋಪಮಿಶ್ರಿತ ಸ್ವರದಲ್ಲಿ. ಅವನು ನಾಲ್ಕನೇ ಗ್ರಾಮದಲ್ಲಿರುವ ಜಮೀನ್ದಾರನಂತೆ. ಈ ಗ್ರಾಮದಲ್ಲಿ ಈ ಹೊಸ ಮನೆಯನ್ನು ಕಟ್ಟಿಸಿ ಬೀಗ ಹಾಕಿಟ್ಟಿದ್ದ ನಂತೆ. ಅವನು ತೋರಿಸಿದ ಪತ್ರಗಳಿಂದ ಅವನು ಹೇಳುವುದು ನಿಜವೆಂದೂ ತಿಳಿಯಿತು.

ಅಚ್ಯುತಾನಂತಯ್ಯ ಉಳಿದವರೊಂದಿಗೆ, "ಯಾವನೋ ನಮಗೆ ಸರಿಯಾಗಿ ನಾಮ ಇಡಿದ. ನಡೆಯಿರಿ! ಮಾರಿದವನನ್ನು ಹಿಡಿದು ಕಕ್ಕಿಸೋಣ ಬನ್ನಿ" ಎಂದನು.

ವಿ. ಎಸ್. ನಾರಾಯಣ

ಆದರೆ ಆ ಮನುಷ್ಯ ಎಲ್ಲರಿಗೂ ಸುಳ್ಳು ಪತ್ತೆಯನ್ನೇ ಕೊಟ್ಟಿದ್ದಾನೆಂದಾಯಿತು. ಅಚ್ಯುತಾನಂತಯ್ಯ ತಿರಿಗಿ ತಿರಿಗಿ ಬೇಸತ್ತು ಮನೆಗೆ ಹಿಂದಿರುಗಿದರು.

ಅದೇ ದಿನ ಸಾಯಂಕಾಲ ಅಚ್ಯುತಾನಂತಯ್ಯನ ಬಾವ ಗೋವಿಂದಯ್ಯ ಅವರ ಬಳಿಗೆ ಬಂದು. "ಏನು ಬಾವಯ್ಯ! ಹೊಸ ಮನೆಗೆ ಗೃಹಪ್ರವೇಶಕ್ಕೆ ಮುಹೂರ್ತ ಯಾವಾಗ?" ಎಂದು ಕೇಳಿದ. ಅಚ್ಯುತಾನಂತಯ್ಯ ಅತನೊಂದಿಗೆ ತಾನು ಮೋಸ ಹೋದ ಬಗೆಗಳನ್ನು ವಿವರವಾಗಿ ಹೇಳಿದರು. ಗೋವಿಂದಯ್ಯ ಬರುವ ನಗುವನ್ನು ನುಂಗಿಕೊಳ್ಳುತ್ತ, "ಅಲ್ಲದಿದ್ದರೂ, ನನಗೆ ಆಶ್ಚರ್ಯವಾಯಿತು. ನೀವು ಕೊಟ್ಟ ಹಣಕ್ಕೆ ಅಷ್ಟು ವಿಶಾಲವಾದ ಖಾಲಿ ಜಾಗೆಯೇ ಸಿಕ್ಕದಿರುವಾಗ. ಅಂಥಾ ಬಾರಿ ಮನೆ ಹೇಗೆ ಸಿಕ್ಕಿತೋ ಅಂತ? ನಿಮಗೂ ಸಂಶಯ ಬರಲಿಲ್ಲವೇ?" ಎಂದು ಕೇಳಿದನು.

"ಅವಸರವಾಗಿ ದೇಶಾಂತರಕ್ಕೆ ಹೋಗುವುದರಿಂದ ಅಗ್ಗಕ್ಕೆ ಮಾರಿದಾ ಅಂದುಕೊಂಡೆ. ಇನೊಬ್ಬರ ಹತ್ತಿರ ಸಾಲ ತೀರಿಸಲು ಮಾರೋದು ಅಂದನಂತೆ. ಒಬ್ಬೊಬ್ಬರ ಹತ್ತಿರ ಒಂದೊಂದು ಕಾರಣ ಹೇಳಿದ. ಹಗಲ್ಗಳ್ಳ! ನನ್ನದು ದುರಾಶೆಯಾಯಿತು. ನನ್ನಂಥವರು ಇನ್ನೂ ನಾಲ್ಕು ಮಂದಿ ಇದ್ದಾರೆ!" ಎಂದರು ದುಃಖದಿಂದ ಅಚ್ಯುತಾನಂತಯ್ಯ.

ಮರುದಿನ ಸಾಯಂಕಾಲ ಅಚ್ಯುತಾನಂತಯ್ಯನ ಮನೆಗೆ ಅವರಿಗೆ ಮನೆಯನ್ನು ಮಾರಿದ ಮಹಾನುಭಾವನೇ ಬಂದುದನ್ನು ನೋಡಿ, ಅಚ್ಯುತಾನಂತಯ್ಯನಿಗೆ, ಆಶ್ಚರ್ಯವೂ ಕೋಪವೂ ಉಕ್ಕಿದುವು. ತುಂಬ ಕೆಟ್ಟ ಮಾತುಗಳಿಂದ ಬಯ್ದರು.

ಅವರ ಬೈಗುಳನ್ನು ಮುಗುಳುನಗುತ್ತಾ ಸ್ವೀಕರಿಸಿ ಕೊಂಡ ಆ ಮನುಷ್ಯ "ನಾನು ಮೋಸಗಾರನಾಗಿದ್ದರೆ ನಿಮ್ಮ ಬಳಿಗೆ ಮತ್ತೆ ಬರುತ್ತಿದ್ದನೇ? ನೀವು ಕೊಟ್ಟ ಹಣಕ್ಕೆ ಸರಿಹೋಗುವ ಜಾಗವನ್ನು ಕೊಂಡು ಕೊಂಡಿದ್ದೇನೆ. ತೆಗೆದುಕೊಳ್ಳಿ!" ಎಂದನು.

ಅಚ್ಯುತಾನಂತಯ್ಯ ಅವನ ಮುಖವನ್ನು ಮಿಳಿಮಿಳಿ ನೋಡುವಾಗ, ಅವನು ಅವರ ಹೆಸರಿನಲ್ಲಿ ತೆಗೆದುಕೊಂಡ ಸ್ಥಳಕ್ಕೆ ಸಂಬಂಧಿಸಿದ ಪತ್ರಗಳನ್ನು ಅವರ ಮುಂದಿಟ್ಟು ಹೊರಟು ಹೋದನು.

ಅಚ್ಯುತಾನಂತಯ್ಯ ಆ ಸ್ಥಳದಲ್ಲಿ ಮನೆ ಕಟ್ಟಿಸಿ ಕೊಂಡು, ಅದರಲ್ಲಿ ಗೃಹಪ್ರವೇಶ ಮಾಡಿಕೊಂಡರು. ಗೃಹಪ್ರವೇಶಕ್ಕೆ ಅವರಂತೆಯೇ ಮೋಸ ಹೋದವರಾದ ನಾಲ್ಕು ಮಂದಿಗಳೂ ಬಂದಿದ್ದರು. ಅಚ್ಯುತಾನಂತಯ್ಯನಿಂದ ಮನೆ ಕಟ್ಟಿಸಲು ಅವರ ಬಾವ ಗೋವಿಂದಯ್ಯನ ಮೂಲಕ ಅವರ ಹೆಂಡತಿಯೇ ಆಡಿಸಿದ ನಾಟಕದಲ್ಲಿ ಆ ನಾಲ್ವರೂ ಜಮೀನ್ದಾರನಂಥವನೂ ಪಾತ್ರಧಾರಿಗಳೇ.



# ಮದ್ದಿಲ್ಲದ ರೋಗ

ಮದ್ದಿಲ್ಲದ ರೋಗ

ಕಾಂಚೀಪುರದ ರಾಜನ ಹೆಂಡತಿ ಕಾಯಿಲೆಯಿಂದ ಮಂಚ ಹಿಡಿದಳು. ಎಂತೆಂತಹ ವೈದ್ಯ ಶಿಖಾಮಣಿಗಳಿಂದಲೂ ಅವಳ ಕಾಯಿಲೆಯನ್ನು ಗುಣಪಡಿಸಲಾಗಲಿಲ್ಲ. ಅವಳ ರೋಗವನ್ನು ಗುಣಪಡಿಸಿದವರಿಗೆ ಒಂದು ಗ್ರಾಮವನ್ನು ಕೊಡುವುದಾಗಿ ರಾಜನು ಪ್ರಕಟಿಸಿದನು.

ಈ ಸಂಗತಿಯನ್ನು ಕೇಳಿ ಯಜ್ಞದತ್ತನೆಂಬ ಘನ ವೈದ್ಯನು ರಾಹುಲನೆಂಬ ಶಿಷ್ಯನೊಂದಿಗೆ ಬಂದು, ರಾಣಿಯನ್ನು ನೋಡಿ, ಅವಳದು ಮನೋ ವ್ಯಾಧಿಯೆಂದೂ ಚಿಕಿತ್ಸೆಗೆ ತಗ್ಗುವಂತಿಲ್ಲವೆಂದೂ ಕಂಡು ಹಿಡಿದನು. ಏನೋ ಚಿಕಿತ್ಸೆ ಮಾಡಿದಂತೆ ನಟಿಸಿ ಗುರುಶಿಷ್ಯರು ಬಿಡದಿಗೆ ಹಿಂದಿರುಗಿದರು.

ಗುರುಗಳು ಹೇಳಿದ ಸಂಗತಿ ಕೇಳಿ ರಾಹುಲನು ಸ್ವಲ್ಪ ಯೋಚಿಸಿ, "ನನ್ನನ್ನು ರಾಣಿಯ ಬಳಿಗೆ ಕರಕೊಂಡು ಹೋಗಿ, ಹಸ್ತ ಸಾಮುದ್ರಿಕೆಯ ಜೋಯಿಸನೆಂದು ಪರಿಚಯಮಾಡಿಸಿರಿ. ರಾಣಿಗೆ ಮಕ್ಕಳಿಲ್ಲದುದೇ ಮನೋ ವ್ಯಾಧಿಗೆ ಕಾರಣವಿರಬಹುದು" ಎಂದನು.

ಅದರಂತೆ ಬಂದ ರಾಹುಲನು ರಾಣಿಯ ಕೈಯನ್ನು ನೋಡಿ, "ಗುರುಗಳೇ, ಮಹಾರಾಣಿಯವರಿಗೆ ಸಂತಾನ ಯೋಗವಿದೆ. ದೊಡ್ಡ ಯಜ್ಞಮಾಡಿಸಬೇಕು" ಎಂದನು.

ರಾಣಿ ಸಂತೋಷದಿಂದ ಎದ್ದು ಕುಳಿತು, "ನನಗೆ ನಿಜಕ್ಕೂ ಮಕ್ಕಳು ಹುಟ್ಟುವರೇ ?" ಎಂದು ಕೇಳಿದಳು.

"ಹುಟ್ಟುವರು. ಆದರೆ ಅವರ ಮೂಲಕವಾಗಿ ನಿಮ್ಮೊಳಗೆ ಅಂದರೆ ಗಂಡ ಹೆಂಡಿರೊಳಗೆ ಅಗಲಿಕೆ ಬಂದು ಬಿಡುತ್ತದೆ" ಎಂದ ರಾಹುಲ.

ರಾಣಿ ದುಃಖದಿಂದ, "ಅದಕ್ಕೆ ಏನು ಮಾಡಬೇಕು ?" ಎಂದು ಕೇಳಿದಳು.

"ಮಕ್ಕಳನ್ನು ದತ್ತಕ್ಕೆ ಮಾಡಿಕೊಂಡರೆ ಸಂತಾನಯೋಗ ಫಲಿಸುತ್ತದೆ" ಎಂದ ರಾಹುಲ.

ಆ ಮೇಲೆ ರಾಣಿಯ ಕಾಯಿಲೆ ಕ್ರಮವಾಗಿ ಕಡಿಮೆಯಾಯಿತು. ಆ ಗುರುಶಿಷ್ಯರಿಗೆ ರಾಜನು ಹೇಳಿದಂತೆಯೇ ಒಂದು ಗ್ರಾಮವನ್ನು ಕೊಟ್ಟನು.





# ಸ್ನೇಹ ಕೂಡಿತು

ಒಂದು ಊರಿನಲ್ಲಿ ವೆಂಕಟಮ್ಮನೆಂಬವಳು. ಚಿಕ್ಕ ಪ್ರಾಯದಲ್ಲೇ ಗಂಡನನ್ನು ಕಳೆದುಕೊಂಡು, ಕೇಶವನೆಂಬ ಮಗನನ್ನು ಕೊಂಡಾಟದಿಂದ ಬೆಳೆಸಿದಳು. ಪ್ರಾಯಬಂದ ಮಗನಿಗೆ, ಸುಂದರಿಯಾದ ಸುಶೀಲೆ ಎಂಬ ಹುಡುಗಿಯೊಬ್ಬಳನ್ನು ತಾನೆ ನೋಡಿ ಮೆಚ್ಚಿ ಮಗನನ್ನು ಒಪ್ಪಿಸಿ ಮದುವೆಯನ್ನೂ ಮಾಡಿದಳು.

ಸ್ವಲ್ಪ ಕಾಲದ ವರೆಗೆ ಅತ್ತೆ, ಸೊಸೆಯರು ತುಂಬ ಸ್ನೇಹವಾಗಿದ್ದರು. ಕಾಲಕ್ರಮದಲ್ಲಿ ಹಸಿಮಣ್ಣಿನ ಅಂಟು ಒಣಗಿದ ಮೇಲೆ ಬಿಟ್ಟು ಹೋಗುವ ಹಾಗೆ ಅವರಿಬ್ಬರ ನಡುವೆ ಸಣ್ಣ ಪುಟ್ಟ ಕೀಚಲಾಟ ಪ್ರಾರಂಭವಾಗಿ, ಬರಬರುತ್ತ ಶ್ರುತಿ ಏರಿತು. ಇದಕ್ಕೆ ಕಾರಣ ಕೇಶವನ ಮೇಲಿನ ಹಕ್ಕಿಗಾಗಿ ಅತ್ತೆಯೂ ಸೊಸೆಯೂ ತಮಗೇ ತಿಳಿಯದಂತೆ ಸ್ಪರ್ಧಿಸಿಕೊಳ್ಳುವುದೆಂದು ಹೇಳಬಹುದು. ಇಬ್ಬರೂ ಕೇಶವನೊಂದಿಗೆ ಒಬ್ಬರ ಮೇಲೊಬ್ಬರು ದೂರು ಹೇಳುತ್ತಿದ್ದರು. ಅವನು ಇಬ್ಬರ ದೂರುಗಳನ್ನೂ ಈ ಕಿವಿಯಲ್ಲಿ ಕೇಳಿ ಆ ಕಿವಿಯಲ್ಲಿ ಬಿಡುತ್ತಿದ್ದನು. ಹೀಗೆ ಅವರಿಬ್ಬರ ವೈರವು, ಹನಿಹನಿಯಾಗಿ ಸುರಿಯುತ್ತ ಜಡಿಮಳೆ ಪ್ರಾರಂಭವಾದ ಹಾಗೇ ಆಯಿತು. ಕಡೆಗೆ ಅವರಿಬ್ಬರೂ ಕೇಶವನೊಂದಿಗೇ ಕಾರಣವೇನಿಲ್ಲದೆ, ಅವನು ತಾಟಸ್ಥ್ಯ ವಹಿಸಿದ್ದೇ ತಪ್ಪಾಯಿತೆನ್ನುತ್ತಾ ಯುದ್ಧಕ್ಕೆ ನಿಂತರು. ಅವರಿಬ್ಬರ ಜಗಳದ ಮಧ್ಯೆ ಕೇಶವನು ತಲೆಹಾಕಿ ಸಮಾಧಾನಪಡಿಸಲು ನೋಡದಿರಲಿಲ್ಲ. ಆದರಿಂದ ಸ್ವಲ್ಪವೂ ಪ್ರಯೋಜನವಿಲ್ಲದೆ ಅವನೇ ಇಕ್ಕಟ್ಟಿನಲ್ಲಿ ಸಿಕ್ಕಿಕೊಳ್ಳುವಂತಾಯಿತು.

ಕಡೆಗೆ ಕೇಶವನು ತನ್ನ ಗೋಳನ್ನು ಕುರಿತು ಒಬ್ಬ ಸ್ನೇಹಿತನೊಂದಿಗೆ ಹೇಳಿಕೊಂಡು. ಅವನು ಹೇಳಿದ ಆಲೋಚನೆಯನ್ನು ಅಮಲಿಗೆ ತಂದನು. ಅದೇನೆಂದರೆ, ಕೇಶವನು ತನ್ನ ಹೆಂಡತಿಯೊಂದಿಗೆ, "ನೀನು ಬಹಳ ಕಾಲದಿಂದ ನಿನ ತೌರಿನವರನ್ನು ನೋಡಬೇಕು, ಹೋಗಬೇಕು ಅನ್ನುತ್ತಿದ್ದೆಯಲ್ಲಾ ? ನನಗೆ ಬಿಡುವಿಲ್ಲದ್ದರಿಂದಲೇ ಇಷ್ಟು ಕಾಲ ಸುಮ್ಮನಿದ್ದೆ. ಹೊರಡು, ನಿನ್ನನ್ನು ಬಿಟ್ಟುಬರುತ್ತೇನೆ" ಎಂದನು.

ತೌರುಮನೆಗೆ ಹೋಗಬೇಕೆಂದು ಸುಶೀಲೆ ಅನೇಕ ಬಾರಿ ಗಂಡನೊಡನೆ ಹೇಳಿದುದು ನಿಜವೇ. ಕೇಶವನೇ ಮುಂದೂಡಿಕೊಂಡು ಬಂದಿದ್ದ. ಈಗ ಅವನು ತಾನಾಗಿ ಹೋಗೋಣವೆಂದುದರಿಂದ ಸುಶೀಲೆಗೆ ಬಹಳ ಆನಂದವಾಯಿತು. ಅದಲ್ಲದೆ ಅವಳಿಗೆ ದಿನಾ

ಬಿ. ಎ. ರಾವ್

ಅತ್ತೆಯೊಂದಿಗೆ ಜಗಳಾಡುವುದರ ಹೊರತು ಸುಖವಾಗಿ ನೆಮ್ಮದಿಯಿಂದ ಕಳೆದ ದಿನಗಳೇ ಇಲ್ಲದಂತಾಗಿತ್ತು. ಸ್ವಲ್ಪ ಕಾಲ ತನ್ನವರ ಮಧ್ಯದಲ್ಲಿದ್ದು ಆನಂದವನ್ನು ಅನುಭವಿಸಿ, ಅತ್ತೆಯ ಚಿರಿಪಿರಿಯನ್ನು ಮರೆತು ಹಾಯಾಗಿರಬಹುದೆನಿಸಿತು.

ಕೇಶವನು ಸುಶೀಲೆಯನ್ನು ಅವಳ ತೌರುಮನೆಯಲ್ಲಿಳಿಸಿ, ಅತ್ತೆಮಾವಂದಿರು ಎಷ್ಟು ಒತ್ತಾಯಿಸಿ ಹೇಳಿದರೂ, "ಕೆಲಸವಿದೆ. ಹೋಗಲೇಬೇಕು" ಎಂದು ಹೇಳಿ ಕೂಡಲೇ ಹಿಂದಿರುಗಿಬಿಟ್ಟನು.

ಸೊಸೆ ಹೊರಟುಹೋದ ಮೇಲೆ ವೆಂಕಟಮ್ಮನಿಗೆ ಒಂದು ದಿನ ಅವಾಂತರದ ಬಿರುಗಾಳಿ ಬಿಟ್ಟು ಹೋದ ಹಾಗೆನಿಸಿತು. ಆ ಮೇಲೆ ಒಂದೊಂದೇ ದಿನಗಳು ಉರುಳುತ್ತಿದ್ದಂತೆ ಮನೆಯೊಳಗೇನೋ ಭಣಭಣವೆನಿಸತೊಡಗಿತು. ಸೊಸೆ ಮನೆಯೊಳಗೆ ಬಹಳ ಕೆಲಸಗಳನ್ನು ಮಾಡುತ್ತಿದ್ದಳು. ಅವಳು ಮಾಡಿದ್ದಕ್ಕೆಲ್ಲ ಹಂಗಿಸುವ ಕೆಲಸ ವೆಂಕಟಮ್ಮನದಾಗಿತ್ತು. ಈಗ ವೆಂಕಟಮ್ಮನಿಗೆ ವಿಶ್ರಾಂತಿಯೇ ಇಲ್ಲ. ಆಗ ತಾನು ಸೊಸೆಯ ಮೇಲೆ ಅಧಿಕಾರ ತೋರಿಸುತ್ತಿದ್ದುದರ ಹೊರತು ಮತ್ತೇನೂ ಮಾಡಿದಂತೆ ಇಲ್ಲವೆಂದು ಈಗ ತೋರಿತು. ಅಭ್ಯಾಸ ತಪ್ಪಿದುದರಿಂದ ಎಲ್ಲಾ ಕೆಲಸ ಮಾಡುವಾಗ ಅವಳ ಮೈಕೈಗಳಲ್ಲಿ ನೋವು ಹತ್ತಿತ್ತು.

ಇದೆಲ್ಲದಕ್ಕಿಂತ ವಿಚಿತ್ರವೇನೆಂದರೆ, ತಾನು ಸೊಸೆಯ ಮೇಲೆ ಯಾವುದಕ್ಕೆ ತಪ್ಪು ಹಾಕಿದೆನೋ, ಏತಕ್ಕೆ ಜಗಳಾಡಿದೆನೋ ವೆಂಕಟಮ್ಮನಿಗೆ ಎಷ್ಟು ಪ್ರಯತ್ನಿಸಿದರೂ ನೆನಪಿಗೆ ಬರಲಿಲ್ಲ. ಕಡೆಗಂತೂ ಅವಳು ಸೊಸೆಯ ದಾರೀ ನೋಡತೊಡಗಿದಳು.

ಸುಮ್ಮನಿರುವ ಕೇಶವನನ್ನು ನೋಡಿ ಒಂದು ದಿನ ವೆಂಕಟಮ್ಮ, "ಏನೋ ಕೇಶವಾ, ಹೋಗಿ ಅವಳನ್ನು ಕರಕೊಂಡು ಬರಬಾರದೇನೋ? ಎಷ್ಟು ದಿನ ಇರುತ್ತಾಳೆ ಅಲ್ಲಿ? ಅವಳ ಮನೇಲಿ ಅವಳಿರಬೇಕಾದ್ದೇ ಚೆನ್ನ! ಅವಳಿಗಾದ್ರೂ ಗೊತ್ತಾಗಬೇಡ್ವೇ?" ಎಂದಳು ತನ್ನ ಅಧಿಕಾರವೂ ಧ್ವನಿಸುವ ಹಾಗೆ. ಆದರೆ ಕೇಶವನು ತಾಯಿಯ ಮಾತನ್ನು ಲಕ್ಷ್ಯ ಮಾಡದವನಂತೆ ಸುಮ್ಮನಿದ್ದನು.



ಅಲ್ಲಿ ಸುಶೀಲೆಗೆ ತೌರುಮನೆಯಲ್ಲಿ ಮೊದಲು ಸುಖವಾಗಿಯೇ ಇದ್ದಿತು. ಆದರೆ ತೌರುಮನೆಯವರಿಗೆ ಬರುಬರುತ್ತ ತನ್ನ ಮೇಲೆ ಶ್ರದ್ಧೆ ತಗ್ಗುವುದನ್ನು ಅವಳು ಗಮನಿಸಿದಳು. ಮೊದಲು ಅತ್ಯಾದರದಿಂದ ನೋಡಿದ ತಾಯಿ. ಮತ್ತೆ ಮತ್ತೆ ಅವಳನ್ನು ಮರೆತ ಹಾಗೆ ಸುಮ್ಮನಿರುವಳು. ಸುಶೀಲೆಯ ಒಡಹುಟ್ಟಿದವರಲ್ಲಿ ಕೂಡಾ ಅವಳ ಮೇಲೆ ತಾತ್ಸಾರ ಭಾವ ತೋರತೊಡಗಿತು.

ಎಲ್ಲದಕ್ಕಿಂತ ಹೆಚ್ಚಾಗಿ ಸುಶೀಲೆಯನ್ನು ನೋಯಿಸುವ ವಿಷಯವೆಂದರೆ, ತನ್ನ ತಾಯಿ ತನ್ನ ಅಣ್ಣನ ಹೆಂಡತಿಯನ್ನು ಮಾತು ಮಾತಿಗೂ ತಪ್ಪು ಹಿಡಿದು ಕೆಟ್ಟಕೆಟ್ಟ ಮಾತಿನಿಂದ ಬಯ್ಯುತ್ತಿದ್ದಳು. ಎಲ್ಲರ ಚಾಕರಿಯನ್ನೂ ಅತ್ತಿಗೆಯಿಂದಲೇ ಮಾಡಿಸುತ್ತಿದ್ದಾಳೆ. ತಿಂಡಿ ಕೂಡ ಸರಿಯಾಗಿ ಕೊಡುವುದಿಲ್ಲ. ತನ್ನ ತಾಯಿಯಲ್ಲಿ ಇಂತಹ ರಾಕ್ಷಸ ಬುದ್ಧಿ ಇದೆಯೆಂದು ಸುಶೀಲೆಗೆ ಗೊತ್ತೇ ಇರಲಿಲ್ಲ. ತಾಯಿ ಅಷ್ಟೊಂದು ಜೋರು ಮಾಡುವಾಗ ಅಣ್ಣನು ಹೆಂಡತಿಯನ್ನು ಸಮಾಧಾನಪಡಿಸುವುದಕ್ಕೆ ಬದಲಾಗಿ. ತಾನು ಕೂಡಾ ಅವಳನ್ನೇ ದಂಡಿಸುತ್ತಾನೆ! ತನ್ನ ಅತ್ತಿಗೆಯನ್ನು ನೋಡಿದ ಮೇಲೆ, ಹೆಣ್ಣು ತಾನು ಹೊಕ್ಕ ಮನೆಯಲ್ಲಿ ಎಷ್ಟು ಹೀನವಾಗಿ ಬದುಕಬೇಕಾಗುತ್ತದೆಂಬುದನ್ನು ತಿಳಿದಳು. ಆ ವಿಷಯದಲ್ಲಿ ತನ್ನ ಅತ್ತೆ ಎಷ್ಟೋ ವಾಸಿ; ದೇವರಂಥವರು ತನ್ನ ಅತ್ತೆ! ಯಾವಾಗ ಗಂಡನ ಮನೆಗೆ ಹೋದೇನೋ ಅನಿಸಿತು ಸುಶೀಲೆಗೆ.

ತಾನು ಗಂಡನ ಮನೆಗೆ ಹೋದಂದಿನಿಂದ ನಡೆದ ಸಂಭವಗಳನ್ನು ನೆನೆದುಕೊಂಡಳು. ಅತ್ತೆ ತನ್ನ ಮೇಲೆ ತೋರಿಸಿದ ಪ್ರೀತಿಯೂ ಆದರಣೆಯೂ ನೆನಪಿಗೆ ಬಂದಿತು. ತಾನು ಅತ್ತೆಯೊಂದಿಗೆ ಏಕೆ ಜಗಳಾಡಿದೆನೆಂಬುದು ಅವಳಿಗೆ ಗೊತ್ತಾಗಲಿಲ್ಲ. ಅಂಥಾ ತಪ್ಪು ಅವರೇನು ಮಾಡಿದರೋ ತಿಳಿಯಲಿಲ್ಲ. ಅವರು ಹೇಳಿದ್ದೆಲ್ಲ ಬುದ್ಧಿ ಮಾತೇ ಅನಿಸಿತು. ಬೇಗ ಹೋಗಿ ಅತ್ತೆಯ ಮಡಿಲಲ್ಲಿ ಬೀಳಬೇಕೆಂದು ತೋರಿತು. ಕಡೆಗೆ ಸುಶೀಲೆ ಗಂಡನೇ ಬಂದು ಕರೆದುಕೊಂಡು ಹೋಗಬೇಕೆಂಬುದಕ್ಕೆ ಕಾಯದೆ, ತಾನಾಗಿಯೇ ಅಲ್ಲಿಂದ ಹೊರಟು ಬಂದುಬಿಟ್ಟಳು.

ಸೊಸೆಯನ್ನು ನೋಡಿದ ಕೂಡಲೇ ವೆಂಕಟಮ್ಮ ಅವಳನ್ನು ಅಪ್ಪಿಕೊಂಡು. "ಇದೇನೇ ಇಷ್ಟು ಸೊರಗಿ ಹೋದೆಯಲ್ಲೇ!" ಎನ್ನುತ್ತಾ ಬೆನ್ನು ತಡವಿದಳು. ಆಗ ಅವಳ ಕಣ್ಣಿಗೆ ಸೊಸೆ ತೌರುಮನೆಯಲ್ಲಿ ತುಂಬಾ ಕಷ್ಟಪಟ್ಟು ಬಂದವಳಂತೆ ಕಾಣಿಸಿದಳು.

ಅಂದಿನಿಂದ ಆ ಅತ್ತೇ ಸೊಸೆಯರು ತಾಯಿ ಮಗಳಿಗಿಂತಲೂ ಹೆಚ್ಚಿನ ಸ್ನೇಹ ಬಂಧನದಲ್ಲಿದ್ದರು. ಕೇಶವನಿಗೂ ಎಲ್ಲವೂ ಮಧುರವೆನಿಸಿತು.





# ವಿಶ್ವಾಮಿತ್ರ

**ಗಾಧಿ** ಎಂಬ ರಾಜನಿಗೆ ಸತ್ಯವತಿ ಎಂಬವಳು ಮಗಳಾಗಿದ್ದಳು. ಈ ಮಗಳ ಹೊರತು ಬೇರೆ ಗಂಡು ಮಕ್ಕಳಿರಲಿಲ್ಲ. ಸತ್ಯವತಿಯನ್ನು ಋಚೀಕನೆಂಬ ತಪಸ್ವಿ ಮದುವೆಯಾಗಿದ್ದನು. ಸತ್ಯವತಿ ಋಚೀಕನೊಂದಿಗೆ ತನಗೂ ತನ್ನ ತಾಯಿಗೂ ಗಂಡು ಮಗನು ಹುಟ್ಟುವಂತೆ ಏನಾದರೂ ಉಪಾಯ ಹೇಳಬೇಕೆಂದು ಕೇಳಿಕೊಂಡಳು.

"ನೀನು ಅತ್ತೀ ಮರಕ್ಕೆ ಪ್ರದಕ್ಷಿಣೆ ಬಂದು ನಮಸ್ಕರಿಸು. ನಿನ್ನ ತಾಯಿ ಅಶ್ವತ್ಥವೃಕ್ಷವನ್ನು ಸುತ್ತಿ ನಮಸ್ಕರಿಸಲಿ. ಕೋರಿಕೆ ಈಡೇರುತ್ತದೆ" ಎಂದು ಹೇಳಿ, ಋಚೀಕನು ಸತ್ಯವತಿಗೂ ಅವಳ ತಾಯಿಗೂ ಬೇರೆಬೇರೆ ಹವ್ಯಗಳನ್ನೂ ತಯಾರಿಸಿ ತಿನ್ನಲು ಕೊಟ್ಟನು.

ಆದರೆ ಒಬ್ಬಳಿಗೆ ಕೊಟ್ಟ ಹವ್ಯವನ್ನು ಇನ್ನೊಬ್ಬಳು ತಿಂದುಬಿಟ್ಟಳು. ಆದುದರಿಂದ ಕ್ಷತ್ರಿಯ ಸ್ವಭಾವದಿಂದ ಹುಟ್ಟಬೇಕಾಗಿದ್ದ ಗಾಧಿಯ ಮಗನು ಬ್ರಾಹ್ಮಣ ಸ್ವಭಾವದಿಂದ ಹುಟ್ಟಿದನು. ಅವನೇ ಪುರಾಣ ಪ್ರಸಿದ್ಧನಾದ ವಿಶ್ವಾಮಿತ್ರ. ರಾಜನ ಮಗನಾದ ವಿಶ್ವಾಮಿತ್ರನು ಕ್ಷತ್ರಿಯನಂತೆ ಬೆಳೆದು ಕೃಶಾಶ್ವನೆಂಬವನ ಹತ್ತಿರ ಅಸ್ತ್ರ ವಿದ್ಯೆಗಳನ್ನು ಕಲಿತು, ಗಾಧಿಯ ಅನಂತರ ತಾನೇ ಪಟ್ಟಾಭಿಷಿಕ್ತನಾಗಿ ರಾಜನೂ ಆದನು.

ಒಮ್ಮೆ ವಿಶ್ವಾಮಿತ್ರನು ಬೇಟೆಯಾಡಲು ಕಾಡಿಗೆ ಹೋಗಿ ಬಳಲಿ ವಸಿಷ್ಠನ ಆಶ್ರಮಕ್ಕೆ ಹೋದನು. ವಸಿಷ್ಠನು ತನ್ನ ಹೋಮಧೇನುವಿನ ಸಹಾಯದಿಂದ ವಿಶ್ವಾಮಿತ್ರನಿಗೂ ಅವನ ಪರಿವಾರದವರಿಗೂ ಅತ್ಯುತ್ತಮವಾದ ಔತಣ ಹಾಕಿದನು.

ಆದನ್ನು ನೋಡಿ ವಿಶ್ವಾಮಿತ್ರನು ವಸಿಷ್ಠನೊಂದಿಗೆ, "ಲಕ್ಷ ಗೋವುಗಳನ್ನು ಕೊಡುತ್ತೇನೆ. ನಿಮ್ಮ ಹೋಮಧೇನುವನ್ನು ನನಗೆ ಕೊಡಿ" ಎಂದನು. ವಸಿಷ್ಠನು ಒಪ್ಪಲಿಲ್ಲ.

ವಿಶ್ವಾಮಿತ್ರನು ಬಲಾತ್ಕಾರದಿಂದ ಆ ಧೇನುವನ್ನು ಕೊಂಡೊಯ್ಯಲು ಪ್ರಯತ್ನಿಸುವಾಗ ವಸಿಷ್ಠನ ತಪಶ್ಶಕ್ತಿಯಿಂದ, ಆ ಧೇನುವಿನ ಹೂಂಕಾರದಲ್ಲಿ ಅಸಂಖ್ಯಾಕವಾಗಿ ಸೈನಿಕರು ಹುಟ್ಟಿ, ವಿಶ್ವಾಮಿತ್ರನನ್ನು ಸೋಲಿಸಿ ಓಡಿಸಿದರು.

ವಸಿಷ್ಠನ ಅಷ್ಟು ಶಕ್ತಿಗೆ ತಪಸ್ಸೇ ಕಾರಣವೆಂದು ಅರಿತು, ವಿಶ್ವಾಮಿತ್ರನು ವಸಿಷ್ಠನ ಮೇಲೆ ಹಗೆ

ತೊಟ್ಟು ರಾಜ್ಯವನ್ನು ಬಿಟ್ಟುಕೊಟ್ಟು ತಪಸ್ಸಿಗೆ ಪ್ರಾರಂಭಿಸಿದನು. ಅವನ ಆಶ್ರಮಕ್ಕೆ ಸಿದ್ಧಾಶ್ರಮವೆಂದು ಹೆಸರು.

ಅಲ್ಲಿ ಅವನ ತಪಸ್ಸನ್ನು ಭಂಗ ಪಡಿಸಲು ದೇವೇಂದ್ರನು ಮೇನಕೆಯನ್ನು ಕಳುಹಿಸಿದನು. ವಿಶ್ವಾಮಿತ್ರನು ಮೇನಕೆಯನ್ನು ಮೋಹಿಸಿ ವರಿಸಿ, ಶಕುಂತಲೆಗೆ ತಂದೆಯಾದನು. ಆಗ ಅವನ ಮೋಹ ಇಳಿದು ಮೇನಕೆಯನ್ನೂ ಮಗುವನ್ನೂ ಬಿಟ್ಟು ಮತ್ತೆ ತಪಸ್ಸಿಗೆ ಹೋದನು. ಆದರೆ ಎಷ್ಟೇ ತಪಸ್ಸು ಮಾಡಿದರೂ ಅವನಿಗೆ ಕೋಪವನ್ನು ಬಿಡಲು ಸಾಧ್ಯವಾಗಲಿಲ್ಲ. ವಸಿಷ್ಠನ ಮೇಲೆ ಅವನಿಗಿರುವ ಹಗೆ ತಣಿಯಲಿಲ್ಲ.

ಹೀಗಿರುವಾಗ ಒಂದು ಅದ್ಭುತವೂ ಅವನಿಂದಾಯಿತು. ಸತ್ಯವ್ರತನೆಂದೂ ತ್ರಿಶಂಕುವೆಂದೂ ಹೆಸರುಳ್ಳ ಸೂರ್ಯವಂಶದ ರಾಜನಿಗೆ ದೇಹದೊಂದಿಗೆ ಸ್ವರ್ಗಕ್ಕೆ ಹೋಗಬೇಕೆಂಬ ಆಶೆಯುಂಟಾಯಿತು. ಅದಕ್ಕೆ ತಕ್ಕ ಯಜ್ಞವನ್ನು ತನ್ನಿಂದ ಮಾಡಿಸಬೇಕೆಂದು ಅವನು ವಸಿಷ್ಠನನ್ನು ಕೇಳಿದನು. ಅದು ಸಾಧ್ಯವಾಗುವಂತಹುದಲ್ಲವೆಂದನು ವಸಿಷ್ಠ. ಅದನ್ನು ಕೇಳಿ ಕೋಪಗೊಂಡ ತ್ರಿಶಂಕು ವಸಿಷ್ಠನನ್ನೂ ಅವನ ಕುಮಾರರನ್ನೂ ನಿಂದಿಸಿದನು. ಅವರು ಚಾಂಡಾಲನಾಗುವಂತೆ ಅವನನ್ನು ಶಪಿಸಿದರು.

ತ್ರಿಶಂಕು ವಿಶ್ವಾಮಿತ್ರನ ಬಳಿಗೆ ಹೋಗಿ, ದೇಹದೊಂದಿಗೆ ಸ್ವರ್ಗಕ್ಕೆ ಹೋಗುವ ತನ್ನ ಕೋರಿಕೆಯನ್ನು ಈಡೇರಿಸಿಕೊಡಲು ಕೇಳಿದನು. ವಿಶ್ವಾಮಿತ್ರನು ಅದಕ್ಕೆ ಒಪ್ಪಿ ತನ್ನ ತಪಃಶಕ್ತಿಯನ್ನೆಲ್ಲಾ ಧಾರೆಯೆರೆದು ಒಂದು ಯಾಗವನ್ನು ಮಾಡಿದನು. ಅದರ ಮಹಿಮೆಯಿಂದ ತ್ರಿಶಂಕು ಸ್ವರ್ಗ ತಲಪುವುದರೊಳಗೆ, ಇಂದ್ರನು ಅವನನ್ನು ಒಳಗೆ ಬರಲು ಬಿಡದೆ ಭೂಮಿಗೇ ದೂಡಿಬಿಟ್ಟನು. ಕೆಳಗೆ ಬೀಳುವ ತ್ರಿಶಂಕುವಿಗಾಗಿ ವಿಶ್ವಾಮಿತ್ರನು ಒಂದು ಸ್ವರ್ಗವನ್ನೇ ಸೃಷ್ಟಿಸಿ ಅಲ್ಲಿ ತ್ರಿಶಂಕು ನೆಲೆಸಿರುವಂತೆ ಮಾಡಿದನು. ಅದು ತ್ರಿಶಂಕು ಸ್ವರ್ಗವೆಂದು ಪ್ರಸಿದ್ಧವಾಯಿತು.

ತಪಸ್ಸನ್ನು ಹೀಗೆ ಕಳೆದುಕೊಂಡ ವಿಶ್ವಾಮಿತ್ರನು ಮತ್ತೆ ಬ್ರಹ್ಮರ್ಷಿಯಾಗಲೇಬೇಕೆಂಬ ಧೃಢ ನಿಶ್ಚಯದಲ್ಲಿ ತಪಸ್ಸಿಗೆ ಕುಳಿತನು. ಇಂದ್ರನು ಈಸಾರಿ ಅವನ ತಪಸ್ಸನ್ನು ಕೆಡಿಸಲು ರಂಭೆಯನ್ನು ಕಳುಹಿಸಿದನು. ಹಿಂದೆ ಮೇನಕೆಯಿಂದ ತಪೋಭಂಗ ಹೊಂದಿ ಬುದ್ಧಿ ತಂದುಕೊಂಡ ವಿಶ್ವಾಮಿತ್ರನು ರಂಭೆಗೆ ವಶನಾಗದೆ ಅವಳನ್ನು ಕಲ್ಲಾಗುವಂತೆ ಶಪಿಸಿಬಿಟ್ಟನು. ಕೋಪವಶದಿಂದ ಹೀಗೆ ತಪಸ್ಸನ್ನು ಅನೇಕಬಾರಿ ಕೆಡಿಸಿಕೊಂಡರೂ ಸಾಧನೆ ಬಿಡದೆ ರಾಜರ್ಷಿ, ಮಹರ್ಷಿ, ಹಂತಗಳನ್ನು ದಾಟಿ, ವಸಿಷ್ಠನಿಂದಲೇ ಬ್ರಹ್ಮರ್ಷಿ ಅನ್ನಿಸಿಕೊಳ್ಳುವವರೆಗೂ ಬಿಡಲಿಲ್ಲ ವಿಶ್ವಾಮಿತ್ರ.





# ಮೃತಸಂಜೀವಿನಿ ವಿದ್ಯೆ

ಆದಿಕಾಲದಲ್ಲಿ ದೇವದಾನವರೊಳಗೆ ಜರುಗಿದ ಮಹಾದಾರುಣವಾದ ಯುದ್ಧಗಳಿಂದ ಉಭಯ ಪಕ್ಷಗಳಲ್ಲಿಯೂ ಅನೇಕಮಂದಿ ಸಾಯುತ್ತಿದ್ದರು. ಆದರೆ ದಾನವರ ಗುರುವಾದ ಶುಕ್ರಾಚಾರ್ಯನಿಗೆ ಮೃತಸಂಜೀವಿನಿ ವಿದ್ಯೆ ಗೊತ್ತಿದ್ದುದರಿಂದ, ಅವನು ಸತ್ತ ರಾಕ್ಷಸರನ್ನು ಮತ್ತೆ ಬದುಕಿಸುತ್ತಿದ್ದನು. ಈ ವಿದ್ಯೆ ದೇವತೆಗಳಿಗೆ ತಿಳಿಯದು.

ದೇವತೆಗಳ ಗುರುವಾದ ಬೃಹಸ್ಪತಿಗೆ ಕಚನೆಂಬ ಕುಮಾರನಿದ್ದನು. ಅವನು ತುಂಬಾ ಬುದ್ಧಿವಂತನಾದುದರಿಂದ, ಶುಕ್ರಾಚಾರ್ಯನಿಂದ ಮೃತಸಂಜೀವಿನಿ ವಿದ್ಯೆ ಕಲಿತುಕೊಂಡು ಬರುವಂತೆ ಹೇಳಿ ದೇವತೆಗಳು ಅವನನ್ನು ಕಳುಹಿಸಿದರು.





ತನ್ನ ಹೊಸ ಶಿಷ್ಯನಾದ ಕಚನ ಶುಶ್ರೂಷೆಗಳಿಂದ ಶುಕ್ರಾಚಾರ್ಯನು ತುಂಬಾ ಮೆಚ್ಚಿದನು. ಅವನ ಮಗಳು ದೇವಯಾನಿ ಕಚನೊಂದಿಗೆ ಗಾಢ ಸ್ನೇಹವಾಗಿದ್ದಳು.



ಕಚನ ಮೇಲೆ ಶುಕ್ರಾಚಾರ್ಯನಿಗೂ ದೇವಯಾನಿಗೂ ಇರುವ ಗಾಢಾನುರಾಗವನ್ನು ನೋಡಿ, ದಾನವರಿಗೆ ಅನುಮಾನವೂ ಈರ್ಷ್ಯೆಯೂ ಉಂಟಾಯಿತು. ಕಚನು ಮೃತಸಂಜೀವಿನೀ ವಿದ್ಯೆಯನ್ನು ಕಲಿಯಲು ಬಂದವನೆಂದು ತಿಳಿದು ಅವನನ್ನು ಕೊಲ್ಲುವ ಪಿತೂರಿಗಳನ್ನು ನಡೆಸಿದರು.



ಒಂದುದಿನ ಹುಲ್ಲುಗಾವಲಿನಲ್ಲಿ ಕಚನು ಗುರುವಿನ ಪಶುಗಳ ಮಂದೆಯನ್ನು ಮೇಯಿಸುತ್ತಿರುವಾಗ, ದಾನವರು ಅಕಸ್ಮಾತ್ತಾಗಿ ಅವನ ಮೇಲೆ ಬಿದ್ದು ಕೊಂದು ಬಿಟ್ಟರು. ಈ ವಿಷಯ ಬೇಗದಲ್ಲೇ ದೇವಯಾನಿಗೆ ತಿಳಿಯಿತು.



ತನ್ನ ಪ್ರಿಯನನ್ನು ಮತ್ತೆ ಬದುಕಿಸಬೇಕೆಂದು ದೇವಯಾನಿ ತನ್ನ ತಂದೆಯನ್ನು ಕೇಳಿಕೊಂಡಳು. ಶುಕ್ರಾಚಾರ್ಯನು ಅದಕ್ಕೆ ಒಪ್ಪಿ ತನ್ನ ವಿದ್ಯೆಯಿಂದ ಕಚನು ಮತ್ತೆ ಬದುಕುವಂತೆ ಮಾಡಿದನು.

ದಾನವರು ಇನ್ನೊಂದು ಉಪಾಯ ಮಾಡಿದರು. ಈಸಾರಿ ಅವರು ಕಚನನ್ನು ಸುಟ್ಟು ಬೂದಿಮಾಡಿ, ಆ ಬೂದಿಯನ್ನು ಮದ್ಯದಲ್ಲಿ ಬೆರೆಸಿ ಬಿಟ್ಟರು.





ತರುವಾಯ ಅವರು ಆ ಮದ್ಯವನ್ನು ತಮ್ಮ ಗುರುವಾದ ಶುಕ್ರಾಚಾರ್ಯನಿಗೇ ಕುಡಿಯಲು ಕೊಟ್ಟು, ಕಚನು ಬದುಕಬಾರದಂತೆ ಮಾಡಿ ಬಿಟ್ಟರು. ಶುಕ್ರನು ಆ ಸಂಗತಿ ತಿಳಿಯದೆ ಅದನ್ನು ಕುಡಿದನು.

ದಾನವರು ಹೊರಟು ಹೋದ ಮೇಲೆ, ದೇವಯಾನಿ ಓಡುತ್ತಾ ಬಂದು. ದಾನವರು ಮಾಡಿದ ಮೋಸವನ್ನು ತಂದೆಯೊಂದಿಗೆ ಹೇಳಿದಳು. ಈಗ ತಾನು ಸಾಯದೆ ಕಚನು ಹೊರಗೆ ಬರುವಂತಿಲ್ಲ. ಬದುಕಿಸಿದರೂ ಹೊಟ್ಟೆಯೊಳಗೇ ಇರಬೇಕಾಗುತ್ತದೆ.





ಆದುದರಿಂದ ಶುಕ್ರನು ತನ್ನ ಹೊಟ್ಟೆಯೊಳಗಿರುವ ಕಚನನ್ನು ತನ್ನ ವಿದ್ಯೆಯಿಂದ ಬದುಕಿಸಿ, ಅಲ್ಲಿಯೇ ಅವನಿಗೆ ಮೃತಸಂಜೀವಿನೀ ಮಂತ್ರವನ್ನು ಉಪದೇಶಿಸಿದನು. ಕಚನು ಶುಕ್ರನ ಹೊಟ್ಟೆ ಸೀಳಿ ಹೊರಗೆ ಬಂದು ಸಹಜ ರೂಪ ಪಡೆದನು. ಶುಕ್ರಾಚಾರ್ಯನು ಸತ್ತನು.



ಅದೇ ಈಗ ಮೃತಸಂಜೀವಿನೀ ವಿದ್ಯೆ ಕಲಿತ ಕಚನು, ಆ ವಿದ್ಯೆಯಿಂದ ಶುಕ್ರಾಚಾರ್ಯನನ್ನು ಬದುಕಿಸಿದನು. ಈವಿಧವಾಗಿ ಕಚನು ಅಲ್ಲಿಗೆ ಬಂದ ಕಾರ್ಯವನ್ನು ಸಾಧಿಸಿಕೊಂಡವನಾದನು.



ಇನ್ನು ಕಚನು ದೇವತೆಗಳ ಕಡೆ ಹೊರಟು ನಿಂತನು. ಅವನನ್ನು ಗಾಢವಾಗಿ ಪ್ರೇಮಿಸಿದ್ದ ದೇವಯಾನಿ ಅವನನ್ನೇ ಮದುವೆಯಾಗಲು ಬಯಸಿದಳು. ಆದರೆ ಗುರುವಿನ ಮಗಳನ್ನು ತಂಗಿಗೆ ಸಮಾನವಾಗಿ ಭಾವಿಸಿದ್ದ ಕಚನು ಅವಳನ್ನು ಮದುವೆಯಾಗಲಿಲ್ಲ.



# ಅಭಿಮನ್ಯು

ಚಿಕ್ಕ ವಯಸ್ಸಿನಲ್ಲೇ ಅಮರನಾದ ಭಾರತದ ವೀರ ಬಾಲ ಅಭಿಮನ್ಯುವಿನ ತಂದೆ ಅರ್ಜುನನೇ. ತಾಯಿ ಸುಭದ್ರೆ. ಪಾಂಡವರು ಶಕುನಿಯೊಂದಿಗೆ ಜೂಜಾಡಿ ಸೋತು ವನವಾಸಕ್ಕೆ ಹೋದಾಗ, ಅವರೊಂದಿಗೆ ಅರಣ್ಯವಾಸ ಮಾಡಿದವಳು. ದ್ರೌಪದಿಯೊಬ್ಬಳೇ, ಪಾಂಡವರ ತಾಯಿ ಕುಂತೀದೇವಿ ಹಸ್ತಿನಾವತಿಯಲ್ಲೇ ಉಳಿದಿದ್ದಳು.

ಕೃಷ್ಣ ಬಲರಾಮರು ತಮ್ಮ ತಂಗಿಯೂ ಅರ್ಜುನನ ಹೆಂಡತಿಯೂ ಆದ ಸುಭದ್ರೆಯನ್ನೂ ಅವಳ ಮಗ ಅಭಿಮನ್ಯುವನ್ನೂ ತಮ್ಮೊಂದಿಗೆ ದ್ವಾರಕೆಗೆ ಕರೆದುಕೊಂಡು ಹೋದರು.

ಬಲರಾಮನಿಗೆ ಶಶಿರೇಖೆ ಎಂಬ ಮಗಳಿದ್ದಳು. ಅವಳು ಅಭಿಮನ್ಯುವನ್ನು ಪ್ರೇಮಿಸಿದ್ದಳು. ಅಭಿಮನ್ಯುವೂ ಅವಳನ್ನು ಪ್ರೇಮಿಸಿದ್ದನು. ಆದರೆ ಬಲರಾಮನು ಶಶಿರೇಖೆಯನ್ನು ದುರ್ಯೋಧನನ ಮಗನಾದ ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡುವ ಉದ್ದೇಶದಲ್ಲಿದ್ದನು.

ತನ್ನ ಉದ್ದೇಶದಂತೆ ಬಲರಾಮನು ಮದುವೆಯ ಪ್ರಯತ್ನಗಳನ್ನೆಲ್ಲಾ ಮಾಡಿದನು, ಮದುಮಗಳು ಹಸೆ ಮಣೆಯ ಮೇಲಿದ್ದಾಗ, ಘಟೋತ್ಕಚನೆಂಬ ಭೀಮನ ರಾಕ್ಷಸ ಪತ್ನಿ ಹಿಡಿಂಬಿಯ ಪುತ್ರನು ಶಶಿರೇಖೆಯನ್ನು ಎತ್ತಿಕೊಂಡು ಹೋಗಿ ಅಭಿಮನ್ಯುವಿನೊಂದಿಗೆ ಅವಳ ವಿವಾಹವನ್ನು ಜರುಗಿಸಿಬಿಟ್ಟನು.

ಪಾಂಡವರು ಹನ್ನೆರಡು ವರ್ಷ ವನವಾಸವನ್ನು ಮುಗಿಸಿದ ಮೇಲೆ, ಮತ್ಸ್ಯದೇಶದ ವಿರಾಟ ನಗರದಲ್ಲಿ ವೇಷ ಬದಲಾಯಿಸಿಕೊಂಡು ಒಂದು ವರ್ಷ ಅಜ್ಞಾತವಾಸವನ್ನೂ ಮಾಡಿ ಹೊರಬಿದ್ದರು. ಈ ಸಂಗತಿಯನ್ನು ತಿಳಿದು ಸುಭದ್ರೆ ಅಭಿಮನ್ಯುವಿನೊಂದಿಗೆ ವಿರಾಟ ನಗರಕ್ಕೆ ಹೋಗಿ ಪಾಂಡವರನ್ನು ಕೂಡಿಕೊಂಡಳು.

ವಿರಾಟ ರಾಜನಿಗೆ ತನ್ನ ಮನೆಯಲ್ಲಿದ್ದ ಪಾಂಡವರ ರಹಸ್ಯ ಆಗ ತಾನೇ ಗೊತ್ತಾಗಿತ್ತು, ತನ್ನ ಮನೆಯಲ್ಲಿ ಬೃಹನ್ನಳೆಯಾಗಿದ್ದು. ಕೌರವರೊಂದಿಗೆ ಯುದ್ಧ ಮಾಡಬೇಕಾಗಿ ಬಂದಾಗ ತನ್ನ ಮಗನಾದ ಉತ್ತರನನ್ನು ಸಾರಥಿಯಾಗಿಟ್ಟುಕೊಂಡು ಕೌರವ ಸೇನೆಯನ್ನು ಸೋಲಿಸಿದವನು ಅರ್ಜುನನೆಂದು ತಿಳಿದಾಗ, ಅವನೊಡನೆ ಸಂಬಂಧ ಬೆಳೆಸಲು ವಿರಾಟನಿಗೆ ಮನಸ್ಸಾಯಿತು.

ತನ್ನ ಮಗಳು ಉತ್ತರೆಯನ್ನು ಮದುವೆ ಮಾಡಿಕೊಳ್ಳುವಂತೆ ವಿರಾಟನು ಅರ್ಜುನನನ್ನು ಕೇಳಿದನು.

ಆದಕ್ಕೆ ಅರ್ಜುನನು ತಾನು ವಿದ್ಯೆ ಕಲಿಸಿದ ತನ್ನ ಶಿಷ್ಯಳಾಗಿದ್ದ ಉತ್ತರೆಯನ್ನು ಅಭಿಮನ್ಯುವಿಗೆ ಕೊಟ್ಟು ಮದುವೆ ಮಾಡಲು ಹೇಳಿದನು. ಅದರಂತೆ ಶುಭ ಮುಹೂರ್ತದಲ್ಲಿ ಉತ್ತರಾಭಿಮನ್ಯುಗಳ ವಿವಾಹವು ವಿರಾಟ ನಗರದಲ್ಲಿ ಘನ ವೈಭವವಾಗಿ ನಡೆಯಿತು.

ಆ ಮೇಲೆ ಬಹು ಬೇಗದಲ್ಲೇ ಶ್ರೀ ಕೃಷ್ಣನ ಸಂಧಾನವು ಮುರಿದು ಕೌರವ ಪಾಂಡವರೊಳಗೆ ಕುರುಕ್ಷೇತ್ರದಲ್ಲಿ ಯುದ್ಧವು ನಿಶ್ಚಯವಾಯಿತು. ಮಹಾ ದಾರುಣವಾದ ಯುದ್ಧವದು. ಅದರಲ್ಲಿ ಅಭಿಮನ್ಯು ಅಸಮಾನವಾದ ಶೌರ್ಯ ಪರಾಕ್ರಮಗಳನ್ನು ಪ್ರದರ್ಶಿಸಿದನು, ಎಲ್ಲರಿಗಿಂತ ಎಳೆಯ ವೀರ ಅಭಿಮನ್ಯುವಿನ ಮುಂದೆ ಎಂತೆಂತಹ ವೀರರೂ ಸ್ವಲ್ಪ ಹೊತ್ತೂ ನಿಂತು ಯುದ್ಧ ಮಾಡಲಾರದೆ ಹೋದರು.

ಒಂದು ದಿನ ದ್ರೋಣನು ಕೌರವ ಸೇನೆಯನ್ನು ಪದ್ಮವ್ಯೂಹದಲ್ಲಿ ನಿಲ್ಲಿಸಿದನು. ಪದ್ಮವ್ಯೂಹವನ್ನು ಭೇದಿಸುವ ಕ್ರಮವು ಅರ್ಜುನನಿಗೂ ಅಭಿಮನ್ಯುವಿಗೂ ಮಾತ್ರವೇ ಗೊತ್ತಿತ್ತು. ಆದರೆ ಆಗ ಅರ್ಜುನನು ಇನ್ನೊಂದು ಕಡೆಯಲ್ಲಿ ಸಂಸಪ್ತಕರೊಂದಿಗೆ ಯುದ್ಧ ಮಾಡಲು ಹೋಗಿದ್ದನು. ಕೌರವರ ಪದ್ಮವ್ಯೂಹವನ್ನು ಭೇದಿಸುವ ಬಾಧ್ಯತೆ ಅಭಿಮನ್ಯುವಿನ ಮೇಲೆ ಬಿದ್ದಿತು.

ಅಭಿಮನ್ಯುವಿಗೆ ಪದ್ಮವ್ಯೂಹದೊಳಗೆ ಪ್ರವೇಶಿಸಲಿಕ್ಕಷ್ಟೇ ಗೊತ್ತಿತ್ತಲ್ಲದೆ, ಅಲ್ಲಿಂದ ಹೊರಗೆ ಬರುವ ಮಾರ್ಗ ಗೊತ್ತಿರಲಿಲ್ಲ.

"ನಾವು ಅವನ ಹಿಂದೆಯೇ ಇದ್ದು ಪದ್ಮವ್ಯೂಹದೊಳಗೆ ಪ್ರವೇಶಿಸುತ್ತೇವೆ. ಶತ್ರುಗಳ ಮಧ್ಯೆ ಅಭಿಮನ್ಯು ಒಬ್ಬನೇ ಇರುವ ಹಾಗೆ ಬಿಡಲಾರೆವು," ಎಂದು ಭೀಮ ಮೊದಲಾದವರು ಧರ್ಮ ರಾಜನಿಗೆ ಧೈರ್ಯ ಹೇಳಿದರು.

ಆದರೆ ಹಾಗಾಗಲಿಲ್ಲ. ಅಭಿಮನ್ಯುವಿನ ಹಿಂದೆಯೇ ಪದ್ಮವ್ಯೂಹದೊಳಗೆ ಪ್ರವೇಶಿಸಲಿದ್ದ ಭೀಮಾದಿಗಳಿಗೆ ಸೈಂಧವನು ತಡೆಯಾಗಿ ನಿಂತು ಅಡ್ಡಗಿಸಿದನು. ಹೀಗಾಗಿ ಅಭಿಮನ್ಯು ಕೌರವ ಸೇನೆಯೊಳಗೆ ಒಬ್ಬಂಟಿಗನಾಗಿ ಸಿಕ್ಕಿಬಿದ್ದನು. ದ್ರೋಣ, ಕೃಪ, ಅಶ್ವತ್ಥಾಮ, ಕೃತವರ್ಮ, ಕರ್ಣ ದುರ್ಯೋಧನರಂತಹ ಮಹಾ ವೀರರೊಂದಿಗೆ ಅಭಿಮನ್ಯು ಒಬ್ಬಂಟಿಗನಾಗಿಯೇ ಯುದ್ಧ ಮಾಡಬೇಕಾಯಿತು. ಅವನು ಧೈರ್ಯ ಗೆಡದೆ, ಆ ವೀರಾಧಿವೀರರಿಗೆಲ್ಲ ಸಾಕು ಸಾಕೆನಿಸುವಂತೆ, ಕೊನೆಯ ಉಸಿರಿರುವವರೆಗೂ ಹೋರಾಡಿ, ವೀರ ಮರಣ ಹೊಂದಿದನು.





# ನಿರಪರಾಧಿ

ಅನೇಕ ವರ್ಷಗಳ ಹಿಂದೆ ಒಂದು ಗ್ರಾಮದಲ್ಲಿ ಜಾತ್ಯಾಚಾರಗಳನ್ನು ಮುಖ್ಯವೆಂದುಕೊಂಡು ಪಾಲಿಸುವವರು ಹೆಚ್ಚಾಗಿದ್ದರು. ಆ ಗ್ರಾಮಕ್ಕೆ ತಾಗದಂತೆ ತುಸು ದೂರದಲ್ಲಿ ಹರಿಜನರ ಕೇರಿ ಇದ್ದಿತು. ಆ ಹರಿಜನರ ಹಿರಿಯನೆನಿಸಿದ ಕಾಳೂ ಎಂಬವನು ತುಂಬ ಸಾಧು ಗುಣದವನು. ಯಾರ ತಂಟೆಗೂ ಹೋಗಬಾರದೆಂದು ಯಾವಾಗಲೂ ಎಲ್ಲರಿಗೂ ಬುದ್ಧಿ ಹೇಳುತ್ತಿದ್ದನು.

ಗ್ರಾಮದಲ್ಲಿರುವವರೆಲ್ಲಾ ಸನಾತನ ಸಾಂಪ್ರದಾಯಕ್ಕೆ ದಾಸರಾಗಿರುವವರು. ಹರಿಜನರ ನೆರಳು ತಮ್ಮ ಮೇಲೆ ಬಿದ್ದರೂ ಸಹಿಸುವವರಲ್ಲ. ಅವರಿಗೆಲ್ಲ ಹಿರಿಯನಾಗಿ ಮಾರ್ಗದರ್ಶಕನಾಗಿರುವವನು ರಾಂಭಟ್ಟ. ಇವನು ಅಪ್ಪಟ ಶ್ರೋತ್ರೀಯನಾದ ಕರ್ಮಠ ಬ್ರಾಹ್ಮಣ.

ಈ ರಾಂಭಟ್ಟನಿಗೆ ಯದು ಎಂಬೊಬ್ಬ ಬಾವಯ್ಯನಿದ್ದ, ಹೆಂಡತಿಯ ತಮ್ಮ. ಅವನು ದುಷ್ಟ ಸಹವಾಸದಿಂದ ಪೂರ್ತಿ ಕೆಟ್ಟು ಹೋದವನು. ಎಲ್ಲಾ ಬಗೆಯ ದುರ್ವ್ಯಸನಗಳಿಗೂ ಅವನು ದಾಸನಾಗಿದ್ದನು. ಅವನು ನಗರದಲ್ಲಿರುತ್ತ, ಆಗಾಗ ರಾಂಭಟ್ಟನ ಮನೆಗೆ ಬಂದು ಕೆಲವು ದಿನ ಅತಿಥಿಯಾಗಿರುತ್ತಿದ್ದನು. ಆ ಕಾಲದಲ್ಲಿ ಯದು ಹರಿಜನರ ಕೇರಿಗೆ ಹೋಗಿ ಅಲ್ಲಿ ಬೇಕಾದ ಹಾಗೆ ಹುಳಿಹೆಂಡ ಕುಡಿಯುವನು. ಅದಕ್ಕಾಗಿ ಕಾಳೂನ ಹತ್ತಿರ ಕೈಗಡ ಮಾಡುವನು. ಈ ಸಾಲ ಹೆಚ್ಚಾಗಿ ಕಾಳೂ ಹಿಂದಿರುಗಿ ಕೇಳಿದಾಗ, ಕೀಳು ಜಾತಿಯ ಅಸ್ಪೃಶ್ಯನೊಬ್ಬ ಸದ್ಬ್ರಾಹ್ಮಣನಿಗೆ ಕೈ ಸಾಲ ಕೊಟ್ಟು ಮತ್ತೆ ಕೇಳಿ ಅವಮಾನಪಡಿಸುವುದುಂಟೇ, ಎಂದು ಕೋಪಗೊಂಡು, ಆ ಕಾಳೂನ ಗರ್ವ ಮುರಿಯಬೇಕೆಂದು ತನ್ನೊಳಗೇ ನಿಶ್ಚಯಿಸಿಕೊಂಡನು ದುಷ್ಟ ಯದು.

ಅವನು ಕಾಳೂನನ್ನು ನೋಡಿ, "ಏನಪ್ಪಾ, ನಿನಗೆ ನಾನು ಹಣ ಕೊಡಲಿಕ್ಕಿದೆಯಲ್ಲವೇ ? ನನ್ನ ಅಕ್ಕ ನಾಳೆ ಸಾಯಂಕಾಲ ನನಗೆ ಸ್ವಲ್ಪ ಹಣ ಕೊಡುತ್ತೇನೆ ಅಂದಿದ್ದಾಳೆ. ನನಗೆ ಎರಡು ಮೂರು ದಿನ ತುರ್ತು ಕೆಲಸವಿರುವುದರಿಂದ ಇತ್ತ ಬರಲು ಸಾಧ್ಯವಿಲ್ಲ. ಹಣವೂ ನನ್ನ ಕೈಯಲ್ಲಿ ನಿಲ್ಲುವುದಿಲ್ಲ. ಆದ್ದರಿಂದ ನೀನು ನಾಳೆ ಸಾಯಂಕಾಲ ರಹಸ್ಯವಾಗಿ ಅಲ್ಲಿಗೆ ಬಂದು ದನಗಳ ಹಟ್ಟಿಯ ಹಿಂದೆ ನಿಲ್ಲು. ನಾನು ನಿನಗೆ ಹಣ ಕೊಟ್ಟುಬಿಡುತ್ತೇನೆ. ದೇವರಾಣೆ, ಬರುತ್ತೀತಾನೇ?"



ಎಂದನು. “ಬರತ್ತೇನೆ ದೇವ್ರೂ” ಎಂದ ಕಾಳೂ. ಮಾರುದಿನ ಕತ್ತಲೆ ಮುಸುಕಿದ ಮೇಲೆ ಕಾಳೂ ಹಟ್ಟಿಯ ಹಿಂದೆ ಬಂದು ನಿಂತಿರುವುದನ್ನು ನೋಡಿ, ಯದು ದೀಪದೊಂದಿಗೆ ಬಂದು “ಯಾರೋ ಅದು ಕಳ್ಳನ ಹಾಗೆ? ಯಾರೋ ಅದು?” ಎಂದು ಗಟ್ಟಿಯಾಗಿ ಕೂಗಿದನು. ಆ ಕೂಗು ಕೇಳಿ ಮನೆಯೊಳಗಿದ್ದವರೆಲ್ಲ ಅಲ್ಲಿಗೆ ಓಡುತ್ತ ಬಂದರು.

ವಿಪರೀತವಾಗುವುದೆಂದು ಹೆದರಿ ಕಾಳೂ ಓಡಿಹೋದನು. ಹಾಗೆ ಓಡಿದವನು ಕಾಳೂನೇ ಎಂದು ಯದು ಕೂಗಾಡಿದ. ಹರಿಜನರ ಮುಖ್ಯಸ್ಥ ಕಾಳೂ. ಕಳ್ಳನ ಹಾಗೆ ರಾಂಭಟ್ಟನ ವಠಾರದೊಳಗೆ ಪ್ರವೇಶಿಸಿದುದನ್ನು ತಿಳಿದು ಗ್ರಾಮದೊಳಗೆ ಕುದಿಕೆಯ ಸಂಚಲನ ಉಂಟಾಯಿತು. ಅದಾಗಿ ಎರಡು ದಿನಗಳಲ್ಲಿ ರಾಂಭಟ್ಟನ ಹಸುವೊಂದು ಸತ್ತಿತು. ಅದು ವಿಷ ಪ್ರಯೋಗದಿಂದ ಸತ್ತಿತೆಂದು ಯದುವೇ ಹುಯಿಲೆಬ್ಬಿಸಿದನು. ಇದರಿಂದ ಗ್ರಾಮಸ್ಥರ ಹೃದಯಗಳು ಹರಿಜನರ ಮೇಲೆ ಕುತಕುತನೆ ಕುದಿಯತೊಡಗಿದುವು.

ಗ್ರಾಮದಲ್ಲೊಂದು ಮಹಾ ಕಾಳೀಯಾಲಯವಿದ್ದಿತು. ಅಲ್ಲಿಯ ಅರ್ಚಕನಾದ ರುದ್ರದೇವನು ಪ್ರಪಂಚವನ್ನು ವಿಶಾಲ ದೃಷ್ಟಿಯಿಂದ ನೋಡುವವನಾಗಿದ್ದನು. ಅವನ ಉದಾರ ಭಾವನೆಗಳೂ, ಸಮಾನದೃಷ್ಟಿಯೂ ಗ್ರಾಮದ ಪ್ರಮುಖರಿಗೆ ಹಿಡಿಸುತ್ತಿರಲಿಲ್ಲ. ಆದರೆ ಆ ದೇವಾಲಯದ ಯಜಮಾನನಾದ ಜಮೀನ್ದಾರನಿಗೆ ರುದ್ರದೇವನ ಮೇಲೆ ತುಂಬಾ ಅಭಿಮಾನವಿದ್ದುದರಿಂದ, ಗ್ರಾಮ ಪ್ರಮುಖರು ಅವನನ್ನೇನೂ ಹಿಂಸೆ ಮಾಡಲು ಸಾಧ್ಯವಿರಲಿಲ್ಲ.

ತನ್ನ ಮೇಲೆ ಊರವರಿಗೆ ಹಗೆಯುಂಟಾಗಿದೆಯೆಂದು ಗೊತ್ತಾದ ಕೂಡಲೇ ಕಾಳೂ ಕಾಡಿನೊಳಗೆ ಓಡಿಹೋಗಿ ಅಡಗಿಕೊಂಡನು. ರಾಂಭಟ್ಟನ ಹಸುವನ್ನು ಮದ್ದು ಹಾಕಿ ಕೊಂದವನು ಕಾಳೂನೇ ಎಂದು ಯದು ಗಂಟೆ ಹೊಡೆದಂತೆ ಹೇಳುತ್ತಿದ್ದನು. ಅದನ್ನು ಕೇಳಿ ಗ್ರಾಮದೊಳಗಿನ ಕೆಲಮಂದಿ ಯುವಕರು ಕಾಳೂನ ಮೇಲೆ ಹಗೆ ತೀರಿಸಿಕೊಳ್ಳಲು ಹರಿಜನರ ಕೇರಿಗೆ ಹೋದರು. ಅಲ್ಲಿ ಕಾಳೂ ಇಲ್ಲವೆಂದು ತಿಳಿದು ಕಾಡಿನೊಳಗೂ ನುಗ್ಗಿದರು. ರುದ್ರದೇವನು ಅವರನ್ನು ತಡೆಯದಿರುತ್ತಿದ್ದರೆ ಹರಿಜನರ ಕೇರಿಯನ್ನೇ ಧ್ವಂಸಮಾಡಿ ಹಾಕುತ್ತಿದ್ದರು. ನಡೆದ ಸಂಗತಿ ತಿಳಿದು ರುದ್ರದೇವನಿಗೆ ಆಶ್ಚರ್ಯವಾಯಿತು. ಕಾಳೂ ತುಂಬಾ ಸಾಧುವೆಂದು ಆತನಿಗೆ ಗೊತ್ತು. ಅವನು ಅಂತಹ ಕೆಲಸ ಮಾಡಿದನೆಂದರೆ ರುದ್ರದೇವನು ನಂಬಲಿಲ್ಲ.

ಕಾಳೂ ಗ್ರಾಮದ ಯುವಕರ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡು. ಅರ್ಧರಾತ್ರಿಯ ಹೊತ್ತಿನಲ್ಲಿ ರುದ್ರದೇವನ ಮನೆಗೆ ಹೋಗಿ, ತನ್ನನ್ನು ಹೇಗಾದರೂ ಕಾಪಾಡಬೇಕೆಂದೂ, ಎಲ್ಲವೂ ಮೋಸವೆಂದೂ ಹೇಳಿ

ನಿಜವಾಗಿ ನಡೆದ ಸಂಗತಿ ಏನೆಂಬುದನ್ನು ವಿವರಿಸಿದನು. ಎಲ್ಲಾ ಕೇಳಿದ ಮೇಲೆ ಅದಕ್ಕೆಲ್ಲಾ ಮೂಲ ಕಾರಣ ಯದುವೇ ಎಂದು ರುದ್ರದೇವನಿಗೆ ಸ್ಪಷ್ಟವಾಗಿ ತಿಳಿಯಿತು. ರಾಂಭಟ್ಟನ ಹಸುವೊಂದು ಬಹಳ ದಿನಗಳಿಂದ ಕಾಯಿಲೆ ಬಿದ್ದಿತ್ತು. ಅದಕ್ಕೆ ಗುಣವಾಗಬೇಕೆಂದು ಕಾಳೀ ದೇವಿಗೂ ಹೂಕೆ ಹೊತ್ತಿದ್ದರು. ಯದುವೇ ಆ ದನವನ್ನು ಮೂಗುಬಾಯಿ ಬಿಗಿದುಕೊಂಡು ವಿಷಪ್ರಯೋಗವೆಂದು ಪುಕಾರು ಎಬ್ಬಿಸಿರಬೇಕು. ಇದಕ್ಕೆಲ್ಲಾ ಕಾಳೂ ಕಾರಣನಲ್ಲವೆಂಬುದನ್ನು ಒಂದು ಇಂದ್ರಜಾಲದ ಮೂಲಕ ಎಲ್ಲರಿಗೂ ಸ್ಪಷ್ಟಪಡಿಸಲು ರುದ್ರದೇವನು ನಿಶ್ಚಯಿಸಿದನು.

ಮರುದಿನ ರುದ್ರದೇವನು ಗ್ರಾಮಸ್ಥರನ್ನೆಲ್ಲಾ ದೇವಾಲಯದ ಆವರಣದಲ್ಲಿರುವ ತನ್ನ ಮನೆಗೆ ಕರೆಯಿಸಿ, "ರಾತ್ರಿ ನನಗೆ ಕಾಳೀದೇವಿ ಕನಸಿನಲ್ಲಿ ಕಾಣಿಸಿ ರಾಂಭಟ್ಟರ ಮನೆಯಲ್ಲಿ ನಡೆದ ಅವಾಂತರಗಳಿಗೆ ಮೂಲಕಾರಣ ಯಾರೆಂದು ಗೊತ್ತಾಗಲಿಕ್ಕೆ ಉಂಗುರಗಳ ಪರೀಕ್ಷೆ ಮಾಡುವಂತೆ ದೇವಿಯ ಅಪ್ಪಣೆಯಾಗಿದೆ. ಸಾಯಂಕಾಲ ದೇವಿಯ ಆಲಯದಲ್ಲಿ ಆ ಪರೀಕ್ಷೆ ಮಾಡಿ ನೋಡೋಣ. ಎಲ್ಲರೂ ತಪ್ಪದೆ ಬನ್ನಿರಿ" ಎಂದನು.

ಕತ್ತಲೆಯಾಗುವ ಹೊತ್ತಿಗೆ ದೇವಾಲಯದ ಮುಂದಿನ ಅಂಕಣವು ಗ್ರಾಮ ಜನರಿಂದ ತುಂಬಿತು. ಬೆಳಕಿಗಾಗಿ ಅಲ್ಲಲ್ಲಿ ಮಸಕು ದೀಪಗಳನ್ನು ಹಚ್ಚಿಟ್ಟಿದ್ದರು. ರುದ್ರದೇವನು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಧ್ಯಾನ ಮಾಡಿ, ಜಾಗಂಟೆ ಬಾರಿಸುವ ಕೋಲನ್ನು ಎತ್ತಿಕೊಂಡು, ಅಲ್ಲಿ ಸೇರಿದ ಜನರ ಕೈಯಿಂದ ಒಂದು ಕೆಂಪುಕಲ್ಲಿನ ಉಂಗುರವನ್ನೂ, ಇನ್ನೊಂದು ನೀಲಕಲ್ಲಿನ ಉಂಗುರವನ್ನೂ ಕೇಳಿ ತೆಗೆದುಕೊಂಡನು.

"ಈ ನೀಲ ಬಣ್ಣದ ಕಲ್ಲಿನ ಉಂಗುರವು ಕಾಳೂನನ್ನು ಸೂಚಿಸುತ್ತದೆ ಎಂದುಕೊಳ್ಳೋಣ. ಅವನು



ತಪ್ಪುಗಾರನಲ್ಲದ ಪಕ್ಷದಲ್ಲಿ ಮತ್ತೊಬ್ಬನು ಆಗಿರಬೇಕಷ್ಟೇ? ಆ ಮತ್ತೊಬ್ಬನನ್ನು ಈ ಕೆಂಪುಕಲ್ಲಿನ ಉಂಗುರವು ಸೂಚಿಸುತ್ತದೆಂದುಕೊಳ್ಳೋಣ. ಈಗ ಮಹಾಕಾಳಿ ಈ ಉಂಗುರಗಳ ಮೇಲೆ ತನ್ನ ಪ್ರಭಾವ ತೋರಿಸಿ ಕಾಳೂನೇ ತಪ್ಪುಗಾರನೆನ್ನುವಳೋ. ಮತ್ತೊಬ್ಬನೆಂದು ಸೂಚಿಸುವಳೋ ನೋಡೋಣ," ಎಂದು ಜಾಗಂಟೆ ಕೋಲನ್ನು ಎಡಗೈಯಲ್ಲಿ ಹಿಡಿದುಕೊಂಡು ಮೊದಲು ನೀಲಕಲ್ಲಿನ ಉಂಗುರವನ್ನು ಕೋಲಿನ ಮೇಲಿನಿಂದ ಕೆಳಕ್ಕೆ ಜಾರಲು ಬಿಟ್ಟನು. ಕಾಳೂನ ಪ್ರತಿನಿಧಿಯಾದ ಅದು ಕೆಳಕ್ಕೆ ಜಾರಿತು. ರುದ್ರದೇವನು ಅದನ್ನು ಮೇಲಕ್ಕೆ ಎತ್ತಿ ತೆಗೆದು, ಕೆಂಪುಕಲ್ಲಿನ ಉಂಗುರವನ್ನು ಜಾಗಂಟೆ ಕೋಲಿನ ಮೇಲಿಟ್ಟು ಕೆಳಕ್ಕೆ ಜಾರಿಸಿದನು. ಆದರೆ ಅದು ಕೆಳಕ್ಕೆ ಜಾರದೆ ಮಧ್ಯದಲ್ಲಿ ನಿಂತು ಮೇಲಕ್ಕೂ ಕೆಳಕ್ಕೂ ಅಲುಗಾಡಿತು. ಅದನ್ನು ನೋಡಿ ಪ್ರೇಕ್ಷಕರು "ಹಾಹಾ" ಎಂದು ಕೂಗಿದರು.

ಕೆಲವರು ಚಪ್ಪಾಳೆ ತಟ್ಟಿ ಕುಣಿದಾಡಿದರು. "ದುಷ್ಟತನ ಮಾಡಿದ ಅಪರಾಧಿ ಕಾಳೂ ಅಲ್ಲ; ಬೇರೆ ಯಾವನೋ" ಎಂದು ಕೂಗಿದನು ಒಬ್ಬ. "ಹೌದು, ಅದನ್ನೇ ಮಹಾ ಕಾಳಿ ಹೇಳುತ್ತಿದ್ದಾಳೆ. ಆ ಮತ್ತೊಬ್ಬನು ಯಾರೆಂಬುದನ್ನು ಹೇಳಲು ದೇವಿಗೆ ಇಷ್ಟವಿಲ್ಲ," ಎಂದನು ರುದ್ರದೇವ. ಗ್ರಾಮಸ್ಥರಿಗೆ ಕಾಳೂನ ಮೇಲೆದ್ದ ಕೋಪ ಒಮ್ಮೆಗೇ ತಣಿಯಿತು. ಆ ಮತ್ತೊಬ್ಬನು ಯಾರು ಯಾರು ಎಂದು ಎಲ್ಲರು ಗುಜು ಗುಜು ಕೇಳಿಕೊಂಡರು.

ಆ ಬೇರೊಬ್ಬನು ಯದುವೇ ಎಂದು ಗ್ರಾಮಸ್ಥರಿಗೆ ಬೇಗದಲ್ಲೇ ತಿಳಿಯುವಂತೆ ಮರುದಿನವೇ ಅವನನ್ನು ಹುಡುಕಿಕೊಂಡು ಪೋಲೀಸರು ಅಲ್ಲಿಗೆ ಬಂದರು. ಅವನು ನಗರದಲ್ಲಿ ಮಾಡಿದ ಅನೇಕ ತಪ್ಪುಗಳಿಗಾಗಿ ಪೋಲೀಸರು ಪತ್ತೆ ಹಚ್ಚಿ ಅವನೇ ಎಂದು ರುಜುಪಡಿಸಿಕೊಂಡು, ಅವನನ್ನು ಹಿಡಿದುಕೊಂಡು ಹೋದರು.

ಇದೆಲ್ಲಾ ನಡೆಯುವಾಗ ಜಮೀನ್ದಾರರ ತೀರ್ಥಯಾತ್ರೆಗೆ ಹೋಗಿದ್ದರು. ಅವರು ಹಿಂದಿರುಗಿ ಬಂದು ನಡೆದ ಸಂಗತಿಯನ್ನೆಲ್ಲಾ ಕೇಳಿ, ಹರಿಜನರಿಗಾಗಿ ಅನೇಕ ಒಳ್ಳೆಯ ಏರ್ಪಾಡುಗಳನ್ನು ಮಾಡಲು ನಿಶ್ಚಯಿಸಿದರು. ಗ್ರಾಮದ ಎಲ್ಲ ಸೌಕರ್ಯಗಳೂ ಅವರಿಗೂ ಬರುವಂತೆ ಮಾಡಬೇಕೆಂದೂ. ದೇವಾಲಯದೊಳಗೆ ಕೂಡಾ ಅವರನ್ನು ಪ್ರವೇಶಗೊಳಿಸಬೇಕೆಂದೂ ಅಂದುಕೊಳ್ಳುತ್ತ ರುದ್ರದೇವನೊಂದಿಗೆ. "ನೀವು ಕಾಳೂನನ್ನು ಕಾಪಾಡಿ ಘನಕಾರ್ಯವೇ ಮಾಡಿದಿರಿ. ಆದರೆ ಅದರಲ್ಲಿ ಮಹಾಕಾಳಿಯನ್ನು ಹೇಗೆ ಆವಾಹನೆ ಮಾಡಿದಿರಿ?" ಎಂದು ಕೇಳಿದನು.

"ಅದಕ್ಕೊಂದು ಸಣ್ಣ ಮೋಸ ಮಾಡಿದೆನಯ್ಯ. ನಾನು ಕಪ್ಪಗಿನ ಅಂಗಿ ಹಾಕಿಕೊಂಡಿದ್ದೆ. ಜಾಗಂಟೇ ಕೋಲಿಗೆ ಕಪ್ಪುದಾರವನ್ನು ಮೇಲ್ಭಾಗದಲ್ಲಿ ಅಂಟಿಸಿಟ್ಟು. ಎರಡನೇ ತುದಿಯನ್ನು ನನ್ನ ಅಂಗಿಯ ಗುಂಡಿಗೆ ಸಿಕ್ಕಿಸಿಕೊಂಡಿದ್ದೆ. ಆ ದಾರ ಯಾರಿಗೂ ಕಾಣುವ ಅವಕಾಶವಿಲ್ಲ. ನೀಲಕಲ್ಲಿನ ಉಂಗುರವನ್ನು ಮೇಲಿನ ಭಾಗದಿಂದ ಕೆಳಕ್ಕೆ ಜಾರಿಸುವಾಗ ಕೋಲನ್ನು ಅಂಗಿಗೆ ಹತ್ತಿರವೇ ಹಿಡಿದುಕೊಂಡೆ. ಉಂಗುರ ಮೇಲಿನಿಂದ ಜಾರಿ ನನ್ನ ಕೈ ಮೇಲೆ ಬಿತ್ತು. ಕೆಂಪು ಕಲ್ಲಿನ ಉಂಗುರವನ್ನು ಜಾರಿಸುವಾಗ ಜಾಗಂಟೆ ಕೋಲನ್ನು ಸ್ವಲ್ಪ ದೂರ ಹಿಡಿದುಕೊಂಡೆ. ಉಂಗುರವು ಕೆಳಕ್ಕೆ ಬಾರದಂತೆ ದಾರ ಅಡ್ಡ ತಡೆಯಿತು. ಆಮೇಲೆ ಕೋಲನ್ನು ಸ್ವಲ್ಪವೇ ಹಿಂದಕ್ಕೂ ಮುಂದಕ್ಕೂ ಆಡಿಸುವಾಗ ಉಂಗುರವು ಮೇಲಕ್ಕೂ ಕೆಳಕ್ಕೂ ಆಡಿ ಕಾಳೂನನ್ನು ಕಾಪಾಡಿತು. ಅದಕ್ಕಿಂತ ಹೆಚ್ಚಿನ ವಿಶೇಷವೇನಿಲ್ಲ" ಎಂದನು ರುದ್ರದೇವ.





# ಶಿಲ್ಪಿ ಶಿರೋಮಣಿ

**ಹಿಂ**ದೆ ಚಂದ್ರಗಿರಿ ರಾಜ್ಯವನ್ನು ಪಾಲಿಸಿದವನಾದ ವಿಜಯಪಾಲ ಮಹಾರಾಜನು ತುಂಬಾ ಕಲಾ ಪಿಪಾಸಿಯಾಗಿದ್ದನು. ಆದುದರಿಂದ ಅವನು ತನ್ನ ಆಸ್ಥಾನದಲ್ಲಿ ಅನೇಕ ಮಂದಿ ಕವಿಗಳನ್ನೂ, ಶಿಲ್ಪಿಗಳನ್ನೂ, ಚಿತ್ರಕಾರರನ್ನೂ, ಗಾಯಕರನ್ನೂ ಇರಿಸಿ ಪೋಷಿಸುತ್ತ, ಪ್ರತಿ ವರ್ಷವೂ ಕಲಾಸ್ಪರ್ಧೆಯನ್ನೂ ಏರ್ಪಡಿಸುತ್ತಿದ್ದನು. ಇದರಿಂದ ಕಲಾಕಾರರಿಗೆ ಪ್ರೋತ್ಸಾಹ ದೊರೆಯುತ್ತಿತ್ತು. ಆ ಸ್ಪರ್ಧೆಯಲ್ಲಿ ಸಾಧಾರಣವಾಗಿ ಚಂದ್ರಗಿರಿಯ ಆಸ್ಥಾನದ ಕಲಾಕಾರರೇ ಗೆಲ್ಲುತ್ತಿದ್ದರು. ಅಪ್ಪಿತಪ್ಪಿ ಬೇರೆ ಹೊರ ದೇಶದ ಕಲಾಕಾರರು ಗೆದ್ದುಬಿಟ್ಟರೆ ಅವರನ್ನು ಏನೋ ಒಂದು ವಿಧವಾಗಿ ವಿಜಯಪಾಲನು ತನ್ನ ಆಸ್ಥಾನದಲ್ಲೇ ಇರಿಸಿಕೊಂಡುಬಿಡುತ್ತಿದ್ದನು.

ಬೇರೆ ಕಲೆಗಳ ಮಾತು ಹೇಗಿದ್ದರೂ ಶಿಲ್ಪ ಕಲೆಯಲ್ಲಿ ಮಾತ್ರ ಅನೇಕ ವರ್ಷಗಳಲ್ಲಿ ಬೇರೆಯಾವ ದೇಶವೂ ಚಂದ್ರಗಿರಿಯನ್ನು ಮೀರಿಸಲಿಲ್ಲ. ಅದಕ್ಕೆ ಕಾರಣನಾಗಿದ್ದವನು ಸುಚಿತ್ರನೆಂಬೊಬ್ಬ ಅದ್ಭುತ ಶಿಲ್ಪಿ. ಶಿಲ್ಪ ಕಲೆಯಲ್ಲಿ ಅವನನ್ನು ಸಮೀಪಿಸಬಲ್ಲವರು ನೂರು ಯೋಜನ ದೂರದಲ್ಲಿ ಯಾರೂ ಇಲ್ಲವೆಂದು ಹೇಳುತ್ತಿದ್ದರು. ಅಂತೆಯೇ ರಾಜಾ ವಿಜಯಪಾಲನಿಗೆ ಆ ಶಿಲ್ಪಿಯ ಮೇಲೆ ಅಪಾರ ಅಭಿಮಾನವಿದ್ದಿತು. ಎಲ್ಲರಿಗಿಂತ ಹೆಚ್ಚಿನ ಆದರವನ್ನು ಅವನ ಮೇಲೆ ತೋರಿಸುತ್ತಿದ್ದನು.

ಅಂತಹ ಅಪ್ರತಿಮ ಶಿಲ್ಪಿ ಸುಚಿತ್ರನು ಆಕಸ್ಮಿಕವಾಗಿ ತೀರಿಹೋಗಿಬಿಟ್ಟನು. ಆ ಮೇಲೆ ವಿಜಯಪಾಲನು ಸುಚಿತ್ರನ ಮಗನಾದ ವೈಶಾಖನನ್ನು ಆಸ್ಥಾನ ಶಿಲ್ಪಿಯನ್ನಾಗಿ ಮಾಡಿಕೊಂಡನು. ವೈಶಾಖನು ತಂದೆಯ ಜತೆಯಲ್ಲೇ ಶಿಲ್ಪಕಾರ್ಯ ಮಾಡಿಕೊಂಡಿದ್ದವನು. ಮೊರಟು ಬಂಡೆಯೊಂದು ಶಿಲ್ಪವಾಗಿ ಹೇಗೆ ಬದಲಾಯಿಸುತ್ತದೆಂಬ ಕಲೆಯ ಮಾರ್ಗಗಳೆಲ್ಲಾ ಅವನಿಗೆ ಗೊತ್ತಿತ್ತು. ಆದರೆ ಸ್ವತಃ ಕಾರ್ಯನಿರ್ಮಾಣದಲ್ಲಿ ಅವನು ಶಿಲ್ಪ ಕಲೆಯ ಮೆಟ್ಟಲುಗಳಲ್ಲಿ ಎರಡು ಮೂರರಷ್ಟೇ ಏರಬಲ್ಲವನಾಗಿದ್ದನು. ಸುಚಿತ್ರನು ಅವನನ್ನು ತನ್ನಂಥವನನ್ನಾಗಿ ಮಾಡಲು ವಿಶ್ವಪ್ರಯತ್ನ ಮಾಡಿದನಾದರೂ, ಅವನ ಪ್ರಯತ್ನಗಳು ಫಲಿಸಲಿಲ್ಲ.

ಆದರೂ ಆ ವರ್ಷ ಚಂದ್ರಗಿರಿಯಲ್ಲಿ ನಡೆದ ಶಿಲ್ಪ ಸ್ಪರ್ಧೆಯಲ್ಲಿ ವೈಶಾಖನ ಶಿಲ್ಪಕ್ಕೇ ಅಗ್ರಸ್ಥಾನ

ಬಿ. ಎನ್. ರಾವ್



ಸಾರಿ ಅನೇಕ ಶಿಲ್ಪಗಳನ್ನು ಕೆತ್ತಬೇಕಾಗಿ ಬಂದಾಗ ಅವುಗಳಲ್ಲಿ ಕೆಲವನ್ನು ಈ ಶ್ರೀಮುಖನೇ ಪೂರ್ತಿಗೊಳಿಸುತ್ತಿದ್ದನು. ಅವನಿಂದ ಪೂರ್ತಿ ಮಾಡಲ್ಪಟ್ಟ ಶಿಲ್ಪಗಳಿಗೂ, ಸುಚಿತ್ರನೇ ಪೂರ್ತಿಗೊಳಿಸಿದ ಶಿಲ್ಪಗಳಿಗೂ ಯಾರೂ ವ್ಯತ್ಯಾಸ ಕಂಡು ಹಿಡಿಯುತ್ತಿದ್ದಿಲ್ಲ. ಅವನ ಪ್ರತಿಭೆಯನ್ನರಿತ ಸುಚಿತ್ರನು ಸಾಯುವಾಗ ಶ್ರೀಮುಖನೊಂದಿಗೆ, "ಕಂದಾ, ನೀನು ಸ್ವತಂತ್ರ ಮಹಾಶಿಲ್ಪಿಯಾಗುವ ವರೆಗೂ ನನ್ನ ಮಗನಿಗೆ ಸಹಾಯಕನಾಗಿರು" ಎಂದು ಹೇಳಿದ್ದನು.

ಗುರುವಿನ ಚರಮವಾಕ್ಯದಂತೆ ನಡೆಯಲು ಸಿದ್ಧನಾಗಿ ಶ್ರೀಮುಖನು ತಾನು ವೈಶಾಖನ ಶಿಷ್ಯನೆಂದು ಹೇಳಿಕೊಳ್ಳುತ್ತ, ವೈಶಾಖನು ತಯಾರಿಸಬೇಕಾಗಿಬಂದ ಶಿಲ್ಪಗಳನ್ನು ತಾನೇ ತಯಾರಿಸುತ್ತ ಬರುತ್ತಿದ್ದನು. ಅವನಿಗೆ ಹೆಸರು ಪ್ರಖ್ಯಾತಿಗಳ ಮೇಲೆ ಸ್ವಲ್ಪವೂ ಲಕ್ಷ್ಯವಿರಲಿಲ್ಲ. ಬಿರುದು ಸನ್ಮಾನಗಳ ಮೇಲೆಯೂ ಆಶೆಯಿರಲಿಲ್ಲ. ಒಳ್ಳೆಯ ಶಿಲ್ಪವು ತಯಾರಾಯಿತೆಂಬುದೊಂದೇ ಅವನಿಗಿರುವ ತೃಪ್ತಿ ಸಂತೋಷ ಎಲ್ಲವೂ.

ವಿಜಯಪಾಲ ಮಹಾರಾಜನಿಗೆ ಮಲ್ಲಿಕಾ ಎಂಬ ಕುಮಾರಿಯೊಬ್ಬಳಿದ್ದಳು. ಅವಳ ಸೌಂದರ್ಯವು ಅಪೂರ್ವವಾಗಿತ್ತು. ಅವಳಿಗೆ ಮದುವೆಯಾಗಬೇಕಾದ ವಯಸ್ಸು ಸಮೀಪಿಸುತ್ತಿದ್ದಿತು. ಅಸಾಧಾರಣವಾದ ಸೌಂದರ್ಯದಭರಣಿಯಂತಹ ತನ್ನ ಕುಮಾರಿಗೆ ಏನಾದರೂ ಅಪಾಯ ಬರಬಹುದೆಂದು ವಿಜಯಪಾಲನಿಗೆ ತೋರತೊಡಗಿತು. ಅಂತೆಯೇ ಅವಳು ರಾಜಭವನವನ್ನು ದಾಟಿ ಹೊರಗೆ ಹೋಗದಂತೆ ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದನು. ಅವಳ ಅತಿಶಯ ಸೌಂದರ್ಯವು ಗಾಳೀ ಸಮಾಚಾರವಾಗಿಯಷ್ಟೇ ಪ್ರಪಂಚಕ್ಕೆ ಗೊತ್ತು.

ಇಂಥವಳಿಗೆ ಮದುವೆ ಮಾಡುವುದು ಹೇಗೆ? ಇದ್ದಕ್ಕಿದ್ದ ಹಾಗೆ ವಿಜಯಪಾಲನಿಗೆ ಒಂದು ಆಲೋಚನೆ

ಲಭಿಸಿತು. ಸ್ಪರ್ಧೆಯ ಫಲಿತಗಳನ್ನು ನಿರ್ಣಯಿಸಿದ ದೇಶದೇಶಗಳ ಶಿಲ್ಪ ನಿಪುಣರು ವೈಶಾಖನು ತಂದೆಗೆ ಎಷ್ಟು ಮಾತ್ರಕ್ಕೂ ಕಡಿಮೆಯಾದವನಲ್ಲವೆಂದು ಒಕ್ಕೊರಲಿನಿಂದ ಅಪ್ಪೋದಿಸಿದ್ದರು.

ಅಂದಿನಿಂದ ವೈಶಾಖನು ತಯಾರಿಸಿದ ಶಿಲ್ಪಗಳಲ್ಲೆಲ್ಲಾ ಅತ್ಯುತ್ತಮವೆನಿಸಿದ ಪ್ರತ್ಯೇಕತೆ ಕಾಣತೊಡಗಿತು. ಅವನಿಂದಾದ ಶಿಲ್ಪಗಳಲ್ಲಿ ಹೊಸ ಬಗೆಯ ಶೈಲಿವಿನ್ಯಾಸಗಳು ಕಾಣುತ್ತಿದ್ದುವು. ಅದರಲ್ಲಿರುವ ನಿಜವಾದ ಗುಟ್ಟೇನೆಂದರೆ, ಆ ಶಿಲ್ಪಗಳನ್ನು ಕೆತ್ತಿಕೊರೆದವನು ವೈಶಾಖನೇ ಅಲ್ಲ; ಶ್ರೀಮುಖನೆಂಬೊಬ್ಬ ಹುಡುಗನ ಕರಕುಶಲತೆಯದು!

ಶ್ರೀಮುಖನು ಸುಚಿತ್ರ ಶಿಲ್ಪಿಯಬಳಿ ಶಿಷ್ಯನಾಗಿ ಕೆಲಸಕ್ಕೆ ಸೇರಿ ಒಂದೆರಡು ವರ್ಷಗಳಲ್ಲೇ ಗುರುವಿಗೆ ಸಮಾನನೆಂಬ ಸಾಮರ್ಥ್ಯವನ್ನು ಸಂಪಾದಿಸಿಕೊಂಡನು. ಶಿಲ್ಪ ಕಲೆ ಅವನಿಗೆ ಪೂರ್ವ ಜನ್ಮ ಸಂಚಿತವಾಗಿ ಬಂದಿರುವಂತಿತ್ತು. ಸುಚಿತ್ರನಿಗೆ ಒಂದೇ

ಬಂದಿತು. ಹೇಗಾದರೂ ಒಂದು ದಿನ ಮದುವೆಯಾಗಿ ಮಲ್ಲಿಕಾ ಗಂಡನ ಮನೆಗೆ ಹೋಗುವವಳೇ. ಆಮೇಲೆ ಎಲ್ಲರ ಹಾಗೆ ಅವಳಿಗೆ ಕೂಡಾ ವಾರ್ಧಕ್ಯವೂ ಬರುತ್ತದೆ. ಈ ದಿನಗಳಲ್ಲಿ ಅವಳಿಗಿರುವ ಅದ್ಭುತ ಸೌಂದರ್ಯವು ಅಶಾಶ್ವತವೆಂಬುದು ನಿಜ. ಅದನ್ನು ಶಾಶ್ವತಗೊಳಿಸಬೇಕಾದರೆ ಒಂದೇ ಒಂದು ದಾರಿ, ಅವಳದೊಂದು ಶಿಲ್ಪ ವಿಗ್ರಹವನ್ನು ತಯಾರಿಸುವುದೇ. ಆ ಕಾರ್ಯಕ್ಕೆ ಆಸ್ಥಾನ ಶಿಲ್ಪಿ ವೈಶಾಖಿನಿಗಿಂತ ಸಮರ್ಥರಾದವರು ಬೇರೆ ಯಾರಿದ್ದಾರೆ ?

ಹೀಗೆ ಅವಳ ಶಿಲ್ಪ ತಯಾರಿಸುವುದರಿಂದ ಪ್ರಸ್ತುತದಲ್ಲಿರುವ ಮುಖ್ಯ ವಿಷಯಕ್ಕೂ ಅನುಕೂಲವಾಗುತ್ತದೆ. ಮಲ್ಲಿಕಾಳನ್ನು ಮದುವೆಯಾಗಲು ಬರುವ ರಾಜಕುಮಾರರು ಒಬ್ಬೊಬ್ಬರ ಮುಂದೆಯೂ ಅವಳನ್ನು ಪ್ರದರ್ಶಿಸುವುದಕ್ಕೆ ಬದಲಾಗಿ ಅವಳ ಪ್ರತಿಮೆಯನ್ನೇ ಪ್ರದರ್ಶಿಸಬಹುದು. ತನ್ನ ಮಗಳನ್ನು ಒಮ್ಮೆಗೇ ಪ್ರತ್ಯಕ್ಷ ನೋಡುವವರಿಗೆ ಚಿತ್ತಭ್ರಮೆ ಹುಟ್ಟಿದರೂ ಆಶ್ಚರ್ಯವೇನಿಲ್ಲವೆಂದು ವಿಜಯಪಾಲನಿಗೆ ಅನುಮಾನವಿದ್ದಿತು.

ಶಿಲ್ಪಿಯ ಮುಂದೆಯೂ ಮಲ್ಲಿಕಾಳನ್ನು ನಿಲ್ಲಿಸುವಂತಿಲ್ಲ. ಆದುದರಿಂದ ವಿಜಯಪಾಲನು ವೃದ್ಧನಾದ ಆಸ್ಥಾನ ಚಿತ್ರಕಾರನಿಂದ ಮಲ್ಲಿಕಾಳ ಎರಡು ಮೂರು ಚಿತ್ರಗಳನ್ನು ತಯಾರು ಮಾಡಿಸಿ, ಅವುಗಳನ್ನು ವೈಶಾಖಿನಿಗೆ ಕೊಟ್ಟು, ರಾಜಭವನದ ಕಲಾಮಂದಿರದಲ್ಲಿ ಮಲ್ಲಿಕಾಳ ಶಿಲ್ಪ ವಿಗ್ರಹವನ್ನು ಕೆತ್ತಲು ಹೇಳಿದನು. ಶಿಲ್ಪವು ತಯಾರಾಗುವವರೆಗೂ ಆ ಮಂದಿರದೊಳಗೆ ಶಿಲ್ಪಿಯ ಹೊರತು ಬೇರೆ ಯಾರೂ ಬಾರದಂತೆ ತಕ್ಕ ಕಟ್ಟುಪಾಡುಗಳನ್ನೂ ಮಾಡಿದನು.

ಆ ಶಿಲ್ಪಕ್ಕೆ ತಕ್ಕುದಾದ ಒಳ್ಳೆಯ ಹಾಲುಗಲ್ಲನ್ನು ಆರಿಸಿ ಅದನ್ನು ಇರಿಸಬೇಕಾದಲ್ಲಿ ಇರಿಸಲಾಯಿತು. ವೈಶಾಖಿನು ಕಲಾಮಂದಿರದೊಳಗೆ ಬಂದನು. ಅವನ ಸಹಕಾರೀ ಶಿಷ್ಯನಾಗಿ ಬಗೆಬಗೆಯ ಉಳಿಗಳನ್ನೂ



ಸುತ್ತಿಗೆಗಳನ್ನೂ ಹಿಡಿದುಕೊಂಡು ಶ್ರೀಮುಖಿನೂ ಬಂದನು. ಇವರಿಬ್ಬರ ಹೊರತು ಮತ್ತಾರಿಗೂ ಪ್ರವೇಶವಿರಲಿಲ್ಲ.

ಶ್ರೀಮುಖಿನೇ ಶಿಲ್ಪವನ್ನು ಕೆತ್ತಿಕೊರೆಯ ತೊಡಗಿದನು. ಮಲ್ಲಿಕಾಳ ಚಿತ್ರಪಟಗಳ ಸಹಾಯದಲ್ಲೇ ಅವನು ಶಿಲ್ಪ ಕೊರೆಯುತ್ತಿದ್ದನು. ಹೀಗೆ ತನದೊಂದು ಶಿಲ್ಪ ಪ್ರತಿಮೆ ತಯಾರಾಗುವ ಸಂಗತಿ ಮಲ್ಲಿಕಾಳಿಗೆ ಅಲ್ಪಸ್ವಲ್ಪ ಗೊತ್ತಾಗಿ ನಿಜವೋ ಸುಳ್ಳೋ ಎಂಬ ಅನುಮಾನಕ್ಕೀಡಾದಳು. ಅದು ಪರಮ ರಹಸ್ಯವಾಗಿ ನಡೆಯುವ ಕೆಲಸವೆಂಬುದು ಅವಳಿಗೆ ತಿಳಿಯದು. ತಂದೆ ಯಾಕೋ ತನ್ನ ಚಿತ್ರ ಬರೆಯಿಸಿದ್ದಾರೆ. "ಮದುವೆಗಾಗಿ ನಿನ್ನ ಶಿಲ್ಪ ವಿಗ್ರಹ ಮಾಡಿಸಲಿಕ್ಕೇ" ಅಂತ ಸಖಿಯೊಬ್ಬಳು ಹಾಸ್ಯವಾಗಿ ಹೇಳಿದ್ದಳು.

ಆಸಕ್ತಿಯನ್ನು ತಡೆಯಲಾರದೆ ಒಂದು ದಿನ ರಾಜಕುಮಾರಿ ಕಲಾಮಂದಿರದೊಳಗೆ ಸದ್ದಿಲ್ಲದೆ ಬಂದು



ಬಿಟ್ಟಳು. ಶಿಲಾವಿಗ್ರಹದ ಮುಂದೆ ಶ್ರೀಮುಖನು ಉಳಿಸುತ್ತಿಗೆ ಹಿಡಿದುಕೊಂಡು, ಪಕ್ಕದಲ್ಲಿ ಇರಿಸಲಾದ ಮಲ್ಲಿಕಾಳ ಚಿತ್ರಪಟಗಳನ್ನು ನೋಡುತ್ತಿದ್ದನು. ವೈಶಾಖನು ದೂರದಲ್ಲಿ ತೂಕಡಿಸುತ್ತಿದ್ದನು.

ಮಲ್ಲಿಕಾ ಬಂದುದನ್ನು ಇಬ್ಬರೂ ಗಮನಿಸಲಿಲ್ಲ. ಶ್ರೀಮುಖನು ಮಲ್ಲಿಕಾಳ ಚಿತ್ರಪಟವನ್ನು ಪರೀಕ್ಷಿಸಿ ನೋಡುತ್ತ, "ಗುರುವರ್ಯಾ! ಈ ಸುಳ್ಳಿನ ಶಿಲ್ಪ ವಿಗ್ರಹವನ್ನು ಮಹಾರಾಜರು ಏಕೆ ತಯಾರಿಸಲಿಕ್ಕೆ ಹೇಳಿದರೋ? ಯಾರಾದರೂ ಇಷ್ಟೊಂದು ಸುಂದರವಾಗಿರುವುದುಂಟೆ? ಇದಕ್ಕಿಂತಲೂ ಸುಂದರವನ್ನು ಊಹಿಸಿ ತಯಾರಿಸುವುದಾದರೆ ಎಷ್ಟೋ ಸುಲಭವಿತ್ತು!" ಎಂದನು.

ವಿಗ್ರಹಕ್ಕೆ ಇನ್ನೂ ಸರಿಯಾದ ರೂಪ ಬಂದಿರಲಿಲ್ಲ. ಅದನ್ನು ಕೆತ್ತುವವನಾಗಿ ಕಂಡ ಶ್ರೀಮುಖನು ಇನ್ನೂ ಅನುಭವಸಾಲದ ಹುಡುಗನಂತೆ ತೋರಿತು ಮಲ್ಲಿಕಾಳಿಗೆ. ಅಂತೆಯೇ ಅವಳು ಅತ್ಯಂತ ಕೋಪದಿಂದ, "ಮೊದಲು ನಿನಗೆ ಉಳಿ ಹಿಡಿಯುವ ರೀತಿಯಾದರೂ ಗೊತ್ತಿದೆಯೇ?" ಎಂದಳು.

ಶ್ರೀಮುಖನು ಬೆಚ್ಚಿ ಬಿದ್ದು ಹಿಂದಿರುಗಿ ನೋಡಿ, ಮಲ್ಲಿಕಾಳ ಅಪೂರ್ವ ಸೌಂದರ್ಯದ ದೃಶ್ಯದಿಂದ ಮತ್ತೇರಿದವನಂತೆ, "ಏನದ್ಭುತ! ಎಂಥಾ ಸೌಂದರ್ಯ ರಾಶಿ! ಇಂಥಾ ಸೌಂದರ್ಯಕ್ಕೆ ಶಿಲ್ಪ ಕಲೆ ಏನಾದರೂ ನ್ಯಾಯ ತೋರಿಸಬಹುದೇ ಹೊರತು ಚಿತ್ರಕಾರನ ಕುಂಚ ಏನು ಮಾಡೀತು ಪಾಪ! ಓ! ಅಮ್ಮಾ! ಶಿಲ್ಪಾಧಿದೇವಿಯೇ! ನೀನು ನನ್ನ ಮುಂದೆ ಸ್ವಲ್ಪ ಹಾಗೇ ನಿಂತರೆ ನಿನ್ನ ರೂಪವನ್ನು ಈ ಶಿಲ್ಪಕ್ಕೆ ಇಳಿಸಿ ಬಿಡುತ್ತೇನೆ" ಎಂದನು.

ಮಲ್ಲಿಕಾಳಿಗೆ ಕೋಪದಿಂದ ಮಾತೇ ಹೊರಡಲಿಲ್ಲ, ಅವಳು ತಟ್ಟನೆ ಹಿಂದಿರುಗಿ ತಂದೆಯ ಬಳಿಗೆ ಹೋಗಿ. "ಎಂಥಾ ಅನ್ಯಾಯ ಇದು ಅಪ್ಪಾ! ನನ್ನ ಪ್ರತಿಮೆಯನ್ನು ಯಾವನೋ ಹುಡುಗನಿಂದ ತಯಾರಿಸುತ್ತಿದ್ದೀರಲ್ಲಾ? ಅವನು ನನ್ನನ್ನು ಕಣ್ಣುಬಿಟ್ಟು ನೋಡಿ, ಬಾಯಿಗೆ ಬಂದ ಹಾಗೆ ಬಗುಳಿದ" ಎಂದು ದೂರು ಹೇಳಿದಳು.

ಇದನ್ನು ಕೇಳಿ ವಿಜಯಪಾಲನಿಗೆ ಏನೋ ದೊಡ್ಡ ಅವಮಾನ ಸಂಭವ ನಡೆದ ಹಾಗೆ ವೇದನೆಯಾಯಿತು. ಕೂಡಲೇ ಅವನು ನಡೆದ ಸಂಗತಿಯನ್ನು ವಿಚಾರಿಸಿ, ಮಲ್ಲಿಕಾಳೊಂದಿಗೆ ಮಾತಾಡಿದವನು ತನ್ನ ಆಸ್ಥಾನ ಮಹಾ ಶಿಲ್ಪಿ ವೈಶಾಖನ ಶಿಷ್ಯನೆಂದೂ, ಇನ್ನೂ ಪ್ರಪಂಚ ಜ್ಞಾನ ತಿಳಿಯದ ಹುಡುಗನೆಂದೂ ತಿಳಿದನು. ಕೂಡಲೇ ಆ ಹುಡುಗನ ಉದ್ಧಟತನಕ್ಕೆ ಶಿಕ್ಷೆಯಾಗಿ ದೇಶ ಬಹಿಷ್ಕಾರ ಮಾಡಿ ಹೊರಡಿಸಿಯೂ ಬಿಟ್ಟನು. ಅವನ ಸಹಾಯವಿಲ್ಲದೆ ಪ್ರತಿಮೆಯನ್ನು ಪೂರ್ತಿಗೊಳಿಸಲು ಸಾಧ್ಯವಿಲ್ಲವೆಂದು ವೈಶಾಖನು ಎಷ್ಟು ಹೇಳಿಕೊಂಡರೂ ರಾಜನು ಲಕ್ಷಿಸಲಿಲ್ಲ.

ಶ್ರೀಮುಖನು ಆ ವಿಗ್ರಹವನ್ನು ಯಾವ ಸ್ಥಿತಿಯಲ್ಲಿ ಅಸಂಪೂರ್ತಿಯಾಗಿ ಬಿಟ್ಟಿದ್ದನೋ, ಅದೇ

ಸ್ಥಿತಿಯಲ್ಲಿ ಹಾಗೆಯೇ ಇದ್ದಿತು. ಅನೇಕ ದಿನಗಳಾದ ಮೇಲೆ ವಿಜಯಪಾಲರಾಜನು, ವೈಶಾಖನನ್ನು ಕರೆಯಿಸಿ, "ಶಿಲ್ಪ ವಿಗ್ರಹವನ್ನು ಪೂರ್ತಿ ಮಾಡದೆ ಹಾಗೆಯೇ ಬಿಟ್ಟಿರಲು ಕಾರಣವೇನೆಂದು ಕೇಳಿದನು. "ಮಹಾಪ್ರಭುಗಳೇ, ಆ ಕೆಲಸದಲ್ಲಿ ನಾನು ಸಮರ್ಥ ನಲ್ಲ. ಸಮರ್ಥನಾದ ಶಿಲ್ಪಿಯನ್ನು ತಾವು ದೇಶ ಬಹಿಷ್ಕಾರ ಮಾಡಿ ಕಳುಹಿಸಿದಿರಿ. ನಾನು ತಯಾರಿ ಸಿದ್ದಾಗಿ ಹೇಳಲ್ಪಟ್ಟ ದೊಡ್ಡದೊಡ್ಡ ಶಿಲ್ಪಗಳೆಲ್ಲ ಅವನಿಂದಲೇ ತಯಾರಾದುವು!" ಎಂದು ನಿಜ ಸಂಗತಿ ಹೇಳಿಕೊಂಡ ವೈಶಾಖ.

ರಾಜನಿಗೆ ಸಂದೇಹವಾಯಿತು. ವೈಶಾಖನು ಈಗ ಹೇಳುವುದು ನಿಜವೋ, ಹಿಂದೆ ಶಿಲ್ಪಿಯಾಗಿ ನಟಿಸಿದ್ದು ಕೂಡಾ ಸುಳ್ಳೋ, ಅಲ್ಲ ಜಡ ಸೋಮಾರಿಯೋ ಎಂಬುದನ್ನು ನಿರ್ಧರಿಸಲಾಗದೆ, ತನ್ನ ಅಭಿಮಾನ ವನ್ನು ಅವಮಾನ ಪಡಿಸಿದನೆಂಬ ಕೋಪದಲ್ಲಿ ವೈಶಾಖನನ್ನು ಸೆರೆಮನೆಯಲ್ಲಿರಿಸಿದನು.

ಆ ಮೇಲೆ ಒಂದು ವರ್ಷ ಕಳೆಯಿತು. ಪದ್ಧತಿ ಯಂತೆ ಮತ್ತೆ ಕಲಾಸ್ಪರ್ಧೆ ನಡೆಯಿತು. ಈ ಸಾರಿ ಆಸ್ಥಾನದ ಶಿಲ್ಪಿಗಳಾರೂ ಸ್ಪರ್ಧೆಯಲ್ಲಿ ಭಾಗವಹಿಸ ಲಿಲ್ಲ. ಬೇರೆ ದೇಶದಿಂದ ಯಾರೋ ಕಳುಹಿಸಿದ ಶಿಲ್ಪ ವಿಗ್ರಹಕ್ಕೆ ಉತ್ತಮ ಬಹುಮಾನವೆಂದು ನಿರ್ಣಾಯಕರು ಏಕಗ್ರೀವರಾಗಿ ನಿಶ್ಚಯಿಸಿದರು. ಅದೊಂದು ಸ್ತ್ರೀಪತಿಮೆ. ಅದು ಮಲ್ಲಿಕಾಳದೇ ಪ್ರತಿಮೆಯೆಂದು ರಾಜನಿಗೂ, ಮತ್ತಿಬ್ಬರು ಅಂತಃ ಪುರದವರಿಗೂ ಮಾತ್ರ ಗೊತ್ತಾಯಿತು.

ಅದನ್ನು ನೋಡಿ ವಿಜಯಪಾಲನು ಅತ್ಯಾಶ್ಚರ್ಯ ಪಟ್ಟನು. ತನ್ನ ಆಸ್ಥಾನ ಶಿಲ್ಪಿ ತಯಾರು ಮಾಡಲಾಗದಂತಹ ಶಿಲ್ಪ ವಿಗ್ರಹವನ್ನು ಯಾವನೋ ಬೇರೆ ದೇಶದ ಶಿಲ್ಪಿಯೊಬ್ಬ ಪ್ರಾಣವಿರುವ ಬೊಂಬೆಯ ಹಾಗೆ ತಯಾರಿಸಿದ್ದಾನೆಂದರೆ! ಅಂತಹ ಶಿಲ್ಪಿಯನ್ನು ತನ್ನ ಆಸ್ಥಾನ ಶಿಲ್ಪಿಯಾಗಿರಿಸಲೇ ಬೇಕು! ವೈಶಾಖನು ಕಾರಾಗೃಹಕ್ಕೆ ಹೋದಂದಿನಿಂದ ಆ ಸ್ಥಳವು ಖಾಲೀಯಾಗಿಯೇ ಇದೆ.

ಅಂತೆಯೇ ಆ ಬಹುಮಾನಿತ ಶಿಲ್ಪಿಗೆ ವಿಜಯ ಪಾಲನ ಆಹ್ವಾನವು ಹೋಯಿತು. ಹಾಗೆ ಬಂದ ಮಹಾ ಶಿಲ್ಪಿ ಸಾಕ್ಷಾತ್ ಶ್ರೀಮುಖನೇ! ಅವನು ಮಲ್ಲಿಕಾಳನ್ನು ಒಂದೇ ಸಾರಿ ನೋಡಿದ್ದನು. ಆದರೆ ಅವಳ ಶರೀರದ ಪ್ರತಿ ಅಣುವೂ ಪ್ರತಿಮೆಯಲ್ಲಿ ಕಾಣುವ ಹಾಗೆ ಮಾಡಿದ್ದನು. ವಿಜಯಪಾಲನು ಶ್ರೀಮುಖನಲ್ಲಿ ಆಗಿ ಹೋದುದನ್ನು ಮರೆಯುವಂತೆ ಕೇಳಿಕೊಂಡು ತನ್ನ ಆಸ್ಥಾನ ಶಿಲ್ಪಿಯಾಗಿ ನಿಯಮಿ ಸಿದನು. ವೈಶಾಖನನ್ನು ಕಾರಾಗೃಹದಿಂದ ಬಿಡುಗಡೆ ಮಾಡಿಸಿ ಸನ್ಮಾನಿಸಬೇಕೆಂಬ ಷರತ್ತಿನ ಮೇಲೆ, ಶ್ರೀಮುಖನು ಆಸ್ಥಾನ ಶಿಲ್ಪಿಯಾಗಲು ಒಪ್ಪಿದನು.





# ಜ್ಯೋಯಿಸನ ಸಾಧನೆ

ಜೋಯಿಸನ ಸಾಧನೆ

ಕಮಲಾಕಾಂತ ಎಂಬವನ ಮಗಳು ಕಮಲೆ ಕುರೂಪಿಯಾಗಿ ಹುಟ್ಟಿದ್ದಳು. ಅವಳು ಬೆಳೆದು ದೊಡ್ಡವಳಾದ ಮೇಲೆ ಮದುವೆ ಮಾಡ ಬೇಕಾಗಿ ಬರುವಾಗ, ಕಮಲಾಕಾಂತನಿಗೆ ಚಿಂತೆಯ ಹೊರೆಯನ್ನೇ ಹೊತ್ತುಕೊಳ್ಳುವಂತಾಯಿತು. ಎಲ್ಲೆಲ್ಲಿ ತಿರುಗಿ ಎಷ್ಟೇ ಪ್ರಯತ್ನ ಮಾಡಿದರೂ ಆ ಹುಡುಗಿಗೆ ಸಂಬಂಧ ಸಿಗದೇಹೋಯಿತು. ಕಮಲಾಕಾಂತನ ಚಿಂತೆಯನ್ನು ನೋಡಿ ಅವನ ಸ್ನೇಹಿತನಾದ ರಮಾಕಾಂತನು "ಇಷ್ಟೊಂದಕ್ಕೆಲ್ಲ ಸುಮ್ಮನೆ ಚಿಂತೆಯಿಂದ ನೆನೆಯುತ್ತಾ ಕೂಡಬಾರದು. ಘಟನೆಯ ವೇಳೆ ಬಂದುಬಿಟ್ಟರೆ ನಿನ್ನ ಮಗಳ ಮದುವೆ ಎಷ್ಟು ಹೊತ್ತು? ಯಾವುದಕ್ಕಾದರೂ ಯೋಗ ಕೂಡಿಬರಬೇಕು. ಆ ಹೊತ್ತು ಬಂದಿತೆಂದರೆ ನಿಲ್ಲಿಸಿದರೂ ನಿಲ್ಲಲಾರದು." ಎಂದು ಸಮಾಧಾನ ಹೇಳಿದನು.

"ಅದು ಯಾವಾಗ ಬರುತ್ತದೆಂದು ಹೇಳುವಿ? ಅದಕ್ಕಾಗಿ ತಾನೇ ನಾನೂ ನೋಡಿ ಕೊಂಡಿದ್ದೇನೆ?" ಎಂದು ಕೇಳಿದ ಕಮಲಾಕಾಂತ. "ಅದನ್ನು ನಾನು ಹೇಗೆ ಹೇಳಲಿ? ಯಾರಾದರೂ ಒಳ್ಳೆಯ ಜೋಯಿಸರನ್ನು ಕೇಳಬೇಕು." ಎಂದನು ರಮಾಕಾಂತ.

"ಅಂದ ಹಾಗೆ ಅಷ್ಟೊಂದು ಉಪಕಾರ ಮಾಡಯ್ಯ. ನಿನಗೆ ತಿಳಿದ ಗಟ್ಟಿಗರಾದ ಜೋಯಿಸರಾರಾದರೂ ಇದ್ದರೆ ಹೇಳಯ್ಯ. ಮಗಳ ಜಾತಕವನ್ನು ತೋರಿಸಿ ಏನು ಹೇಳುವರೋ ಕೇಳುತ್ತೇನೆ" ಎಂದನು ಕಮಲಾಕಾಂತ.

ಕಮಲಾಕಾಂತನಿಗೆ ಉಪಯೋಗ ಬೀಳುವ ಜ್ಯೋತಿಷ್ಯನು ರಮಾಕಾಂತನ ಬಂಧುಗಳಲ್ಲೇ ಒಬ್ಬನಿದ್ದ. ಅವನೊಬ್ಬ ಎಳೆಮೀಸೆಯ ಹುಡುಗ. ಮುರಳಿ ಎಂಬುದು ಅವನ ಹೆಸರು. ಅವನಿಗೆ ಜ್ಯೋತಿಷ್ಯವನ್ನು ಕಲಿಯಬೇಕೆಂದು ವಿಪರೀತ ಆಶೆಯಿತ್ತು. ಎಷ್ಟೋ ಜೋತಿಷ್ಯ ಗ್ರಂಥಗಳನ್ನು ಓದಿ ತನ್ನ ಜ್ಯೋತಿಷ್ಯ ಜ್ಞಾನವನ್ನು ಪರೀಕ್ಷಿಸಿಕೊಳ್ಳುವಂತಹ ಸಂದರ್ಭಕ್ಕೆ ಕಾಯುತ್ತಿದ್ದನು.

ಆ ಮುರಳಿ ಒಂದು ದಿನ ರಮಾಕಾಂತನ ಜಾತಕವನ್ನು ಕೇಳಿಪಡೆದು ಪರೀಕ್ಷಿಸಿ ನೋಡಿ, "ಸರಿಯಾಗಿ ಇನ್ನೆರಡು ತಿಂಗಳೊಳಗೆ ನಿಮಗೆ ಧನಲಾಭ ಇದೆ." ಎಂದಿದ್ದನು.

ಆಗ ಹಣದ ಮುಗ್ಗಟ್ಟಿನಲ್ಲಿದ್ದ ರಮಾಕಾಂತನು "ಸರಿಯಾಗಿ ನೋಡಿ ಹೇಳು. ನಿನಗೆ ನಿಜವಾಗಿಯೂ

ಜಿ. ರಾಮಲಕ್ಷ್ಮಿ

ಜ್ಯೋತಿಷ್ಯ ಗೊತ್ತಿದೆಯೇನು ?" ಎಂದು ಕೇಳಿದ್ದನು. "ನನ್ನ ಜ್ಯೋತಿಷ್ಯ ಎಂದಿಗೂ ತಪ್ಪದು !" ಎಂದಿದ್ದ ಮುರಳಿ. ಅವನು ಅಷ್ಟಕ್ಕೆ ಸುಮ್ಮನಿರದೆ ದಿನಾ ರಮಾಕಾಂತನ ಬಳಿಗೆಬಂದು ಅವನಿಗೆ ಧನಲಾಭ ಆಗಿತ್ತೋ ಇಲ್ಲವೋ ಎಂಬುದನ್ನು ವಿಚಾರಿಕೊಂಡು ಹೋಗುತ್ತಿದ್ದನು.

ಹೀಗೆ ಎರಡು ತಿಂಗಳು ಸುಮ್ಮನೆ ಕಳೆಯಿತೇ ಹೊರತು ರಮಾಕಾಂತನಿಗೆ ಧನಲಾಭವೇನೂ ಆಗಿರಲಿಲ್ಲ. ಕಡೆಗೆ ಮುರಳಿಯೊಂದಿಗೆ ರಮಾಕಾಂತನು, "ಎಂಥಾ ಜ್ಯೋತಿಷ್ಯ ನಿನ್ನದು ? ಒಂದು ಚಿಕ್ಕಾಸೂ ಲಾಭ ಬರಲಿಲ್ಲವಲ್ಲ!" ಎಂದನು.

"ಹಾಗೆ ಹೇಳಬೇಡಿ ದೊಡ್ಡಪ್ಪಾ. ಇವತ್ತು ತಾನೆ ನಾನು ಹೇಳಿದ ಎರಡು ತಿಂಗಳು ಪೂರ್ತಿಯಾಗುವ ದಿನ ? ನಾನು ದಿನವನ್ನು ಲೆಕ್ಕ ಮಾಡಿಕೊಂಡೇ ಇದ್ದೇನೆ. ಎಷ್ಟು ಮಾತ್ರಕ್ಕೂ ನನ ಜ್ಯೋತಿಷ್ಯ ಸುಳ್ಳಾಗುವ ಹಾಗೆ ಬಿಡಲಾರೆ. ಇವತ್ತು ನಾನೇ ನಿಮಗೆ ನೂರು ರೂಪಾಯಿ ಕೊಡುತ್ತೇನೆ ನೋಡಿ !" ಎಂದು ಜೇಬಿನಿಂದ ಹಣವನ್ನು ತೆಗೆದನು.

"ನೀನು ನಿಜವಾದ ಜೋಯಿಸನೇ ಸರಿ !" ಎಂದು ರಮಾಕಾಂತನು ನಿರ್ದಾಕ್ಷಿಣ್ಯವಾಗಿ ಅವನು ಕೊಟ್ಟ ನೂರು ರೂಪಾಯಿಯನ್ನು ತೆಗೆದುಕೊಂಡನು.

"ಈ ಘಟನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ರಮಾಕಾಂತನು ಮುರಳಿಯ ಬಳಿಗೆ ಹೋಗಿ ಜ್ಯೋತಿಷ್ಯನೆಂದರೆ ನಿನ್ನಹಾಗೆ ಇರಬೇಕು. ಪಾಪ, ಆ ಕಮಲಾಕಾಂತನಿಗೆ ಒಳ್ಳೆಯ ಗಟ್ಟಿಗನಾದ ಜೋಯಿಸನೇ ಸಿಗಲಿಲ್ಲ. ನೀನೊಮ್ಮೆ ಹೋಗಿ ಅವನನ್ನು ನೋಡಪ್ಪ" ಎಂದನು.

ತನ್ನ ಜ್ಯೋತಿಷ ಜ್ಞಾನವನ್ನು ಪ್ರದರ್ಶಿಸಲು ಒಳ್ಳೆಯ ಅವಕಾಶ ಸಿಕ್ಕಿತೆಂಬ ಸಂತೋಷದಲ್ಲಿ ಮುರಳಿ ಉತ್ಸಾಹದಿಂದ ಕಮಲಾಕಾಂತನ ಮನೆಗೆ ಬಂದು ತನ್ನ ಪರಿಚಯ ಹೇಳಿಕೊಂಡನು. ಕಮಲಾಕಾಂತನು ಮುರಳಿಗೆ ಕಮಲೆಯ ಜಾತಕವನ್ನು ತಂದು ತೋರಿಸಿ, "ಈ ಜಾತಕದ ಹುಡುಗಿಗೆ ಯಾವಾಗ ಮದುವೆಯಾಗುವುದೆಂದು ಹೇಳಪ್ಪಾ," ಎಂದನು.



ಮುರಳಿ ಎಲ್ಲಾ ಪರೀಕ್ಷಿಸಿ ನೋಡಿ, "ಈ ಜಾತಕದಲ್ಲಿರುವ ಪ್ರಕಾರ ಇನ್ನು ಒಂದು ತಿಂಗಳೊಳಗೆ ಮದುವೆ ಆಗಲೇಬೇಕು. ತಯಾರಾಗಿರಿ" ಎಂದು ಹೇಳಿ ಮುಹೂರ್ತವನ್ನೂ ನಿಶ್ಚಯಿಸಿ ಕೊಟ್ಟನು.

ಕಮಲಾಕಾಂತನು ಸಂತೋಷದಿಂದ ತನ್ನ ಮಗಳನ್ನು ಕರೆದು ಮುರಳಿಗೆ ತೋರಿಸಿ, "ಮೂರು ವರ್ಷಗಳಿಂದ ಸಂಬಂಧ ಹುಡುಕುತ್ತಾ ಇದ್ದೇನೆ. ಅಂಥವಳಿಗೆ ತಿಂಗಳೊಳಗೆ ಮದುವೆ ಯಾಗುವುದು ಅಂದರೆ ಹೇಗೆ ನಂಬಲಿ ?" ಎಂದನು.

ಕಮಲೆಯನ್ನು ನೋಡಿದ ಕೂಡಲೇ ಮುರಳಿಗೆ ಬೇವಿನಕಾಯಿ ಗಂಟಲಲ್ಲಿ ಸಿಕ್ಕಿಕೊಂಡ ಹಾಗಾಯಿತು. ಅದನ್ನು ತೋರಿಸಿಕೊಳ್ಳದೆ, "ಅದೆಲ್ಲಾ ಆಗುತ್ತೆ. ಜಾತಕದ ಗ್ರಹಕೂಟ ಹಾಗಿದೆ. ನನ್ನ ಜ್ಯೋತಿಷ್ಯ ತಪ್ಪದು !" ಎಂದು ಹೇಳಿ ಅಪ್ಪಣೆ ಪಡೆದು ಹೊರಟನು ಮುರಳಿ. ಮತ್ತೆ ಅವನು ಸುಮ್ಮನಿರದೆ ಕಮಲೆಗಾಗಿ ತಾನೇ ಸಂಬಂಧ ಹುಡುಕ ತೊಡಗಿದನು. ಅವನು ಹೇಳಿದ ಮುಹೂರ್ತದ ದಿನ ಸಮೀಪಿಸಿ ಕೊಂಡಿದ್ದಿತು. ಆದರೆ ಕಮಲೆಗೆ ಯಾವ ಸಂಬಂಧವೂ ಕೂಡಿ ಬರಲಿಲ್ಲ. ಕಡೆಗೆ ಮುರಳಿ ಕಮಲಾಕಾಂತನ ಬಳಿಗೆ ಹೋಗಿ, "ನಾನು ಹೇಳಿದ ಜ್ಯೋತಿಷ್ಯವು ತಪ್ಪಲಿಕ್ಕೆ ಸಾಧ್ಯವೇ ಇಲ್ಲ. ಆದುದರಿಂದ ಕಮಲೆಯನ್ನು ನಾನೇ ವಿವಾಹ ಮಾಡಿಕೊಳ್ಳುತ್ತೇನೆ," ಎಂದನು.

ಮತ್ತೇನು ? ಘನವೈಭವದಲ್ಲಿ ಕಮಲಾ ಮುರಳಿಯರ ಮದುವೆ ನಡೆಯಿತು. ಎಲ್ಲಾ ಆದ ಮೇಲೆ ರಮಾಕಾಂತನು ಮುರಳಿಯನ್ನು ನೋಡಿ "ಹೀಗೆ ನಡೆಯುತ್ತದೆಂದು ನನಗೆ ಮೊದಲೇ ಗೊತ್ತಿತ್ತು. ಕಮಲಾಕಾಂತನಿಗೆ ಬೇಕಾದಷ್ಟು ಆಸ್ತಿ ಪಾಸ್ತಿ ಧನವಿದೆ. ನಿನಗೇನೋ ಜ್ಯೋತಿಷ್ಯದ ಹುಚ್ಚು. ಅದಕ್ಕೆ ಜತೆ ಒಣಹಟ. ನಿನ್ನಂತಹ ದಾಕ್ಷಿಣ್ಯದವನಿಗೆ ಒಬ್ಬ ಧನಿಕನಾದ ಮಾವಯ್ಯ ನಿರುವುದು ಒಳ್ಳೆಯದೆಂದೇ ಹೀಗೆ ಮಾಡಿದೆ. ಇನ್ನೊಮ್ಮೆ ನನ್ನ ಜಾತಕ ನೋಡಿ ಯಾವುದಾದರೂ ಸಂದಿಗೊಂದಿಯಲ್ಲಿ ಧನಲಾಭ ಏನಾದರೂ ಇದೆಯೋ ಅಂತ ಸ್ವಲ್ಪ ನೋಡಿ ಹೇಳು ವಿಯಾ?" ಎಂದನು.

"ನಡೆದ ಪ್ರಯೋಜನವೇ ಸಾಕೆಂದು ಮಾಡಿ, ಜ್ಯೋತಿಷ್ಯವನ್ನು ಬಿಟ್ಟುಬಿಟ್ಟೆನು ದೊಡ್ಡಪ್ಪಾ!" ಎಂದ ಮುರಳಿ.

ಆದರೆ ಮುರಳಿಯ ದಾಂಪತ್ಯ ಜೀವನವು ಸೊಗಸಾಗಿಯೇ ಕಳೆಯುತ್ತಿತ್ತು. ಕಮಲೆ ಕುರೂಪಿಯಾದರೂ ಅವಳ ಮನಸ್ಸು ತುಂಬಾ ಒಳ್ಳೆಯದು. ಅಂತಹ ಸುಗುಣವತಿಯೊಂದಿಗೆ, ಬೇಕಾದ ಹಾಗೆ ಧನವೂ ಇರುವಾಗ ಮುರಳಿಯ ಜೀವನವು ಸುಖವಾಗಿಯೇ ಸಾಗುತಿತ್ತು.





# ದೇವೀಭಾಗವತ

ಮತ್ಸ್ಯಗಂಧಿ ಎಂಬ ಹೆಣ್ಣು ಮಗು ಬೆಸ್ತರ ಮನೆಯಲ್ಲೇ ಬೆಳೆಯುತ್ತ, ಆತ್ಮಾಕರ್ಷಣೀಯಳಾದ ಸೌಂದರ್ಯವತಿಯಾಗಿ ದೊಡ್ಡವಳಾದಳು.

ಒಂದು ದಿನ ಪರಾಶರನೆಂಬ ಮುನಿ ಯಮುನಾ ನದಿಯ ಬದಿಗೆ ಬಂದು, ನದಿಯನ್ನು ದಾಟಲು ದೋಣಿಗಾಗಿ ಬೆಸ್ತನನ್ನು ಕೂಗಿ ಕರೆದನು. ಆ ಸಮಯದಲ್ಲಿ ಬೆಸ್ತನು ಊಟ ಮಾಡಿಕೊಂಡಿದ್ದುದರಿಂದ, ಮುನಿಯನ್ನು ನದಿ ದಾಟಿಸುವಂತೆ ತನ್ನ ಮಗಳಿಗೆ ಹೇಳಿದನು. ಅವಳು ದೋಣಿಯಲ್ಲಿ ಪರಾಶರನನ್ನು ಕೂಡಿಸಿ ನದಿಯಲ್ಲಿ ಹೊರಟಳು.

ದೋಣಿ ಸಾಗುತ್ತಿದ್ದಂತೆ, ಹುಟ್ಟು ಹಾಕುತ್ತ ದೋಣಿಯನ್ನು ನಡೆಸುವ ಮತ್ಸ್ಯಗಂಧಿಯ ಸೌಂದರ್ಯವನ್ನು ನೋಡುತ್ತ, ಪರಾಶರ ಮುನಿಯನ್ನು ಮೋಹವು ಆವರಿಸ ತೊಡಗಿತು. ಮೆಲ್ಲನೆ ಅವನು ಅವಳ ಕೈಯನ್ನು ಮುಟ್ಟಿದನು.

ಆಗ ಅವಳು ಮುಗುಳು ನಕ್ಕು, "ನಿಮ್ಮಂಥ ಶ್ರೇಷ್ಠರು ನನ್ನಂಥ ಹೀನಳನ್ನು ಮುಟ್ಟಬಹುದೆ?" ಎಂದಳು. ಅವಳಿಗೆ ಪರಾಶರ ಮುನಿಯ ಶ್ರೇಷ್ಠತೆ ಗೊತ್ತಿತ್ತು. ಅವನು ವಸಿಷ್ಠನ ಮೊಮ್ಮಗ. ಅಂತಹವನು ತನ್ನಂತಹ ಮತ್ಸ್ಯದ ದುರ್ವಾಸನೆ ಹೊಡೆಯುವವಳನ್ನು ಮುಟ್ಟಿದರೆ, ಮೋಹಿಸಿದರೆ, ಬೇರೆ ಋಷಿ ಮುನಿಗಳು ನಗಾಡರೆ? ಇದನ್ನೆಲ್ಲಾ ಮತ್ಸ್ಯಗಂಧಿ ವಿವರಿಸಿ ಹೇಳಿ ಎಚ್ಚರಿಸಿದರೂ ಪರಾಶರನು ಲಕ್ಷ್ಯಮಾಡಲಿಲ್ಲ. ಮತ್ತೆ ಅವಳ ಕೈಯನ್ನು ಹಿಡಿದುಕೊಂಡನು. ಅವನು ತೀವ್ರ ಮೋಹಾವೇಶದಲ್ಲಿರುವುದರಿಂದ, ತನ್ನ ಮಾತನ್ನು ಕೇಳಲಾರನೆಂದು ಅವಳಿಗೂ ಗೊತ್ತಾಯಿತು. ಮೋಹವು ತೀವ್ರವಾದರೆ ಎಂತಹ ವಿವೇಕಿಯನ್ನೂ ತುಳಿದುಹಾಕುತ್ತದೆ. ಪರಾಶರನಂತಹ ಮಹಾತ್ಮನನ್ನು ನಿಗ್ರಹಿಸುವ ಶಕ್ತಿಯೂ ತನಗಿಲ್ಲ.

ಇದನ್ನೆಲ್ಲ ಮನದಂದು ಮತ್ಸ್ಯಗಂಧಿ. ಪರಾಶರನೊಂದಿಗೆ ಅನೇಕ ಕೋರಿಕೆಗಳನ್ನು ಕೇಳಿದಳು. ತಾನು ಕನ್ಯೆಯಾದುದರಿಂದ ತನ್ನ ಕನ್ಯಾತ್ವಕ್ಕೆ ಹಾನಿ ಬರಬಾರದು. ತನ್ನ ಶರೀರದ ದುರ್ಗಂಧವು ಹೋಗಿ,

೬. ವ್ಯಾಸನ ಜನನ



ಸುಗಂಧವಾಗಬೇಕು, ತಾನು ಪರಾಶರನೊಂದಿಗಿರುವುದನ್ನು ಆಕಾಶವೂ ಯಮುನಾ ನದಿಯೂ ನೋಡಬಾರದು, ಅವನಿಂದ ಹುಟ್ಟುವ ಫಲವು ಸದ್ಯೋಗರ್ಭಜಾತವಾಗಿರಬೇಕು. ಆ ಮಗನು ಪರಾಶರನಿಗಿಂತ ಸ್ವಲ್ಪವೂ ಕಡಿಮೆಯವನಾಗಬಾರದು. ಅವಳ ಈ ಎಲ್ಲಾ ಕೋರಿಕೆಗಳನ್ನೂ ಪರಾಶರನು ತೀರಿಸಿದನು. ಅವನ ತಪಸ್ಸಿನ ಮಹಿಮೆಯಿಂದ ಅವಳು ಸುಗಂಧಿನಿಯಾದಳು. ಅವರಿಬ್ಬರನ್ನೂ ದಟ್ಟವಾದ ಮಂಜು ಮುಸುಗು ಹಾಕಿತು. ಕೂಡಲೇ ಅವಳಿಗೆ ಗರ್ಭೋತ್ಪತ್ತಿಯಾಯಿತು. ಪರಾಶರನು ತಪಸ್ಸಿಗೆ ಹೊರಟುಹೋದನು. ಸತ್ಯವತಿಗೆ ಸದ್ಯೋ ಗರ್ಭದಿಂದ ಹುಟ್ಟಿದ ಮಗನು, ತಾಯಿಗೆ ಕೈ ಮುಗಿದು, "ಅಮ್ಮಾ, ನಾನು ಹೋಗಿ ತಪಸ್ಸು ಮಾಡಿಕೊಳ್ಳುತ್ತೇನೆ. ನೀನು ಯಾವಾಗ ನೆನೆಯುವಿಯೋ ಆವಾಗ ಬರುತ್ತೇನೆ." ಎಂದು ಹೇಳಿ ಹೊರಟುಹೋದನು. ಸತ್ಯವತಿಯ ಆ ಮಗನೇ ವ್ಯಾಸನು. ವೇದಗಳನ್ನು ವಿಭಜಿಸಿ ರಚಿಸಿದವನಾದುದರಿಂದ ಆತನಿಗೆ ವ್ಯಾಸನೆಂಬ ಹೆಸರು ಬಂತು. ಅವನ ನಿಜವಾದ ಹೆಸರು ದ್ವೈಪಾಯನನೆಂದು. ಅವನು ಹದಿನೆಂಟು ಪುರಾಣಗಳನ್ನೂ ಬರೆದು ತನ್ನ ಶಿಷ್ಯರಿಗೆ ಹೇಳಿದನು. ಆತನ ಶಿಷ್ಯರಲ್ಲಿ ಸುಮಂತ, ಜೈಮಿನಿ, ಪೈಲ, ವೈಶಂಪಾಯನ, ಅಸಿತ, ದೇವಲ ಮೊದಲಾದವರ ಸಾಲಿನಲ್ಲಿ ಶುಕನೂ ಸೇರಿದ್ದಾನೆ.

ಸುಗಂಧಿನಿಯಾದ ಮತ್ಸ್ಯಗಂಧಿ ಸತ್ಯವತಿ ಎಂಬ ಹೆಸರಿನಲ್ಲಿ ತನ್ನ ತಂದೆಯೊಂದಿಗೆ ವಾಸಮಾಡಿಕೊಂಡಿರುವಾಗ, ಸ್ವಲ್ಪಕಾಲದ ಮೇಲೆ ಶಂತನು ಎಂಬ ರಾಜನು ಅವಳನ್ನು ನೋಡಿ ಮೋಹಗೊಂಡು ಮದುವೆ ಮಾಡಿಕೊಂಡನು. ಅವಳಿಗೆ ಮಗಂದಿರು ಹುಟ್ಟಿದರು.

ಸೂತ ಪುರಾಣಿಕನು ಹೀಗೆ ಹೇಳುತ್ತಿರಲು, ಶೌನಕಾದಿ ಮುನಿಗಳು ಅಡ್ಡ ಬಂದು, "ಮಹಾನುಭಾವರೇ, ಸತ್ಯವತಿಯೂ, ವ್ಯಾಸನೂ ಹುಟ್ಟಿದ ವಿಧಾನಗಳನ್ನು ಹೇಳಿ ನಮಗೆ ಸಂತೋಷವನ್ನುಂಟುಮಾಡಿದಿರಿ. ಆದರೆ ಒಂದು ಸಂಶಯ. ಶಂತನು ಪುರು ವಂಶದಲ್ಲಿ ಹುಟ್ಟಿದ ದೊಡ್ಡ ರಾಜನಾಗಿರುವಾಗ, ಸಾಧಾರಣ ಬೆಸ್ತರ ಕುಲಕ್ಕೆ ಸೇರಿದ ಸತ್ಯವತಿಯನ್ನು ಹೇಗೆ ಮದುವೆಯಾದನು? ಆತನಿಗೆ ಅದಕ್ಕಿಂತ ಮೊದಲು ಮದುವೆಯಾಗಿಲ್ಲವೆ? ಭೀಷ್ಮನು ಅವನ ಮಗನೇ ಅಲ್ಲವೇ? ಆ ವಿವರಗಳನ್ನೆಲ್ಲಾ ವಿವರಿಸಿ ಹೇಳಬೇಕು." ಎಂದು ಕೇಳಿಕೊಂಡರು. ಆಗ ಸೂತನು ಈ ರೀತಿಯಾಗಿ ಹೇಳಿದನು:

### ಶಂತನುವಿನ ಕಥೆ

ಪೂರ್ವಕಾಲದಲ್ಲಿ ಮಹಾಭಿಷನೆಂಬ ಒಬ್ಬ ದೊಡ್ಡ ರಾಜನಿದ್ದ. ಅವನು ಆ ಕಾಲದಲ್ಲಿದ್ದ ಎಲ್ಲಾ ರಾಜಮಹಾರಾಜರೊಳಗೂ ಮೇಲಾದವನು. ಆತನು ಸಾವಿರ ಅಶ್ವಮೇಧ ಯಾಗಗಳನ್ನು ಮಾಡಿ, ಇಂದ್ರನನ್ನು ಮೆಚ್ಚಿಸಿ ಬೇಕೆನಿಸಿದಾಗಲೆಲ್ಲಾ ಸ್ವರ್ಗಕ್ಕೆ ಹೋಗಿ

ಬರುತ್ತಿದ್ದನು. ಎಲ್ಲರೂ ಅವನನ್ನು ಇನ್ನೊಬ್ಬ ಇಂದ್ರನೆಂದೇ ಹೇಳುತ್ತಿದ್ದರು.

ಒಂದುಸಾರಿ ಅವನು ಇತರ ದೇವತೆಗಳೊಂದಿಗೆ ಕೂಡಿ ಬ್ರಹ್ಮನನ್ನು ನೋಡಬೇಕೆಂದು ಸತ್ಯಲೋಕಕ್ಕೆ ಹೋದನು. ಅದೇ ಸಮಯದಲ್ಲಿ ಗಂಗಾದೇವಿ ಕೂಡಾ ಬ್ರಹ್ಮನ ದರ್ಶನಕ್ಕಾಗಿ ಬಂದು ಒಂದು ಬದಿಯಲ್ಲಿ ನಿಂತಿದ್ದಳು.

ಆಗ ಜೋರಾಗಿ ಒಂದು ಗಾಳಿ ಬೀಸಿದುದರಿಂದ ಗಂಗಾದೇವಿ ಉಟ್ಟುಕೊಂಡ ಬಟ್ಟೆ ಸ್ವಲ್ಪ ಜಾರಿ, ಅವಳ ಶರೀರದ ಭಾಗಗಳು ಮಿಂಚಿದುವು. ಆ ಕ್ಷಣದಲ್ಲಿ ದೇವತೆಗಳೆಲ್ಲಾ ತಮ್ಮ ಕಣ್ಣುಗಳನ್ನು ಬೇರೆ ಕಡೆಗೆ ತಿರುಗಿಸಿಕೊಂಡರು. ಕೆಲವರು ತಲೆ ತಗ್ಗಿಸಿದರು. ಆದರೆ ಮಹಾಭಿಷನು ಮಾತ್ರ ಸ್ವಲ್ಪವೂ ಸಭ್ಯತೆಯನ್ನು ಪಾಲಿಸದೆ, ಗಂಗೆಯ ಶರೀರ ಸೌಂದರ್ಯದಿಂದ ಮೋಹಾವೇಶಕ್ಕೊಳಗಾಗಿ ನೆಟ್ಟ ದೃಷ್ಟಿಯಿಂದ ಅವಳನ್ನೇ ನೋಡುತ್ತ ಕುಳಿತುಬಿಟ್ಟನು. ಗಂಗೆಯೂ ಸಹ ಮಹಾಭಿಷನನ್ನೇ ಮೋಹಕವಾಗಿ ನೋಡಿದಳು.

ಅವರಿಬ್ಬರ ನಡುವಿನ ಆಕರ್ಷಣೆಯ ದೃಷ್ಟಿಪಾಟವವನ್ನು ಗಮನಿಸಿದ ಬ್ರಹ್ಮನು ಕೋಪಗೊಂಡು, "ಹಿರಿಯರ ಸಮ್ಮುಖದಲ್ಲಿ ಮರ್ಯಾದೆ ಮೀರಿ ವರ್ತಿಸಿರುವ ನೀನಿಬ್ಬರೂ ಭೂಮಿಯಲ್ಲಿ ಮಾನವರಾಗಿ ಹುಟ್ಟಿರಿ" ಎಂದು ಶಾಪಕೊಟ್ಟನು. ಹೀಗೆ ಶಾಪಬಂದಿತಲ್ಲಾ ಎಂಬ ಚಿಂತೆಯಿಂದ ಅವರಿಬ್ಬರೂ ಅಲ್ಲಿಂದ ಹೊರಟುಹೋದರು.

ಬ್ರಹ್ಮನ ಶಾಪವನ್ನು ಅನುಭವಿಸಿ ತೀರಲೇಬೇಕಾದುದರಿಂದ, ಮಹಾಭಿಷನು ಯಾರ ಮಗನಾಗಿ ಹುಟ್ಟಬಹುದೆಂದು ಆಲೋಚಿಸುತ್ತ, ಕಡೆಗೆ ಪುರುವಂಶದದನಾದ ಪ್ರತೀಪನೆಂಬ ರಾಜನಿಗೆ ಮಗನಾಗಿ ಹುಟ್ಟುವುದಾಗಿ ನಿಶ್ಚಯಿಸಿದನು.

ಅವನ ಸಂಗತಿ ಹಾಗಿರುವಾಗ ಒಂದುಸಾರಿ ಅಷ್ಟವಸುಗಳೂ ತಮ್ಮ ತಮ್ಮ ಪತ್ನಿಯರೊಂದಿಗೆ



ವಸಿಷ್ಠನ ಆಶ್ರಮಕ್ಕೆ ಹೋದರು. ಅವರೊಳಗೆ ಪ್ರಭಾಸನೆಂಬ ವಸುವಿನ ಹೆಂಡತಿ, ನಂದಿನಿ ಎಂಬ ವಸಿಷ್ಠನ ಗೋವನ್ನು ನೋಡಿ, "ಆ ಹಸು ಎಲ್ಲಾ ಹಸುಗಳ ಹಾಗಿಲ್ಲ. ಯಾವುದೋ ಶ್ರೇಷ್ಠ ಜಾತಿಯದಿರಬೇಕು ಅಲ್ಲವೆ?" ಎಂದು ಗಂಡನೊಡನೆ ಅದರ ವಿಷಯ ತಿಳಿಯುವ ಕುತೂಹಲದಿಂದ ಕೇಳಿದಳು.

"ನಿಜವೇ. ವಸಿಷ್ಠನ ಮುಖ್ಯ ಸಂಪತ್ತೇ ಅದು. ಅದರ ಹೆಸರು ನಂದಿನಿ. ಕಾಮಧೇನುವಿನ ಸಂತತಿಯದು. ಅದರ ಹಾಲು ಕುಡಿದವರಿಗೆ ವಾರ್ಧಕ್ಯವೂ ಮರಣವೂ ಬರುವುದಿಲ್ಲವಂತೆ" ಎಂದು ಪ್ರಭಾಸನು ಹೆಂಡತಿಯೊಂದಿಗೆ ಹೇಳಿದನು.

"ಹಾಗಾದರೆ ಆ ಗೋವನ್ನು ನನ್ನ ಸ್ನೇಹಿತೆಯಾದ ಉಶೀನರ ರಾಜನ ಮಗಳು ಜಿತವತಿಗೆ ಕೊಡಬೇಕು. ಅವಳು ಸುಂದರಿಯಾಗಿ ಸಾವಿಲ್ಲದೆ ಚಿರಕಾಲ ಬದುಕಿರಬೇಕು. ನನ್ನ ಈ ಆಸೆ ತೀರಲಿಕ್ಕಾಗಿ ಹೇಗಾದರೂ ಮಾಡಿ ಆ ಗೋವನ್ನು ತಂದೇ ತೀರ



ಬೇಕು" ಎಂದು ಹಟ ಹಿಡಿದಳು ಪ್ರಭಾಸನ ಹೆಂಡತಿ. ಹೆಂಡತಿಯರ ವ್ಯಾಮೋಹದಲ್ಲಿ ಬಿದ್ದವನಿಗೆ ಯುಕ್ತಾಯುಕ್ತ ವಿವೇಕವು ಇರಲಾರದು. ಪ್ರಭಾಸನು ಉಳಿದ ವಸುಗಳ ಸಹಾಯದಿಂದ ವಸಿಷ್ಠನ ನಂದಿನೀಧೇನುವನ್ನು ಅಪಹರಿಸಿಕೊಂಡು ಹೋದನು. ತನ್ನ ಹಸು ಕಾಣದೇ ಹೋದುದನ್ನು ನೋಡಿ ವಸಿಷ್ಠನು ಬಹಳ ಕಷ್ಟಪಟ್ಟು ಹುಡುಕತೊಡಗಿದನು. ಕಡೆಗೆ ವಸುಗಳು ಅದನ್ನು ಅಪಹರಿಸಿಕೊಂಡು ಹೋಗಿರುವ ಸಂಗತಿ ಅವನಿಗೆ ತಿಳಿಯಿತು. ಕೂಡಲೇ ಅವರು ಮನುಷ್ಯರಾಗಿ ಹುಟ್ಟುವಂತೆ ಶಾಪಕೊಟ್ಟನು. ಈ ಸಂಗತಿ ವಸುಗಳಿಗೂ ತಿಳಿಯಿತು. ಅವರು ನಂದಿನಿಯನ್ನು ತಂದು ಅವನಿಗೆ ಒಪ್ಪಿಸಿ, ಶಾಪವನ್ನು ಹಿಂದೆಗೆದುಕೊಳ್ಳಬೇಕೆಂದು ಕಾಲಿಗೆ ಬಿದ್ದು ಬೇಡಿಕೊಂಡರು.

ವಸಿಷ್ಠನಿಗೆ ಅವರ ಮೇಲೆ ಕರುಣೆಯುಂಟಾಗಿ, "ಹೆಂಡತಿಗಾಗಿ ನನ್ನ ಧೇನುವನ್ನು ಅಪಹರಿಸಿ ಮಹಾಪಾಪ ಮಾಡಿದ ಪ್ರಭಾಸನು ಮಾತ್ರ ಮನುಷ್ಯನಾಗಿ ಬದುಕಿಕೊಂಡು, ಕಡೆಯವರೆಗೂ ಬ್ರಹ್ಮಚಾರಿಯಾಗಿಯೇ ಇರಬೇಕು. ಉಳಿದ ಏಳು ಮಂದಿಯೂ ಹುಟ್ಟಿದ ಕೂಡಲೇ ಶಾಪವಿಮೋಚನೆ ಪಡೆದು ನಿಮ್ಮ ನಿಮ್ಮ ಪೂರ್ವರೂಪ ಪಡೆಯಬಹುದು," ಎಂದನು.

ವಸಿಷ್ಠನು ಅಷ್ಟರ ಮಟ್ಟಿಗಾದರೂ ಕರುಣೆ ತೋರಿಸಿದುದಕ್ಕೆ ಸಮಾಧಾನಪಟ್ಟು ಅವರು ಅಲ್ಲಿಂದ ಹಿಂದಿರುಗುತ್ತಿರಲು, ಭೂಲೋಕಕ್ಕೆ ಹೋಗುತ್ತಿದ್ದ ಗಂಗಾದೇವಿ ಅವರಿಗೆ ಇದಿರಾಗಿ ಬಂದಳು. ಅವಳೂ ವಸುಗಳೂ ತಮ್ಮ ಶಾಪಗಳನ್ನು ಕುರಿತು ಒಬ್ಬರಿಗೊಬ್ಬರು ಹೇಳಿಕೊಂಡರು. ಆಗ ವಸುಗಳು ಗಂಗೆಯೊಂದಿಗೆ, "ಅಮ್ಮಾ, ನಾವು ನಿನ್ನ ಹೊಟ್ಟೆಯಲ್ಲಿಯೇ ಹುಟ್ಟುತೇವೆ. ನೀನು ನಮ್ಮ ಮೇಲೆ ಅನುಗ್ರಹವಿಟ್ಟು ಶಂತನು ರಾಜನಿಗೆ ಪತ್ನಿಯಾಗಿದ್ದುಬಿಡು. ಆಮೇಲೆ ನಾವು ಒಬ್ಬೊಬ್ಬರಾಗಿ ನಿನ್ನ ಮಗನಾಗಿ ಹುಟ್ಟುತ್ತೇವೆ. ಹುಟ್ಟಿದ ಕೂಡಲೇ ನಮ್ಮನ್ನು ಕೊಂದುಬಿಡು. ನಮ್ಮ ಶಾಪ ಬೇಗದಲ್ಲೇ ಮುಗಿದುಹೋಗುತ್ತದೆ" ಎಂದು ಕೇಳಿಕೊಂಡರು.

ಗಂಗಾದೇವಿ ಅದಕ್ಕೆ ಒಪ್ಪಿದಳು. ಹೀಗೆ ಮುಂದೆ ನಡೆಯಬೇಕಾದುದೆಲ್ಲ ಮೊದಲೇ ನಿಶ್ಚಯವಾದಂತಾಯಿತು.

ಹೀಗಿರುವಾಗ ಒಂದು ದಿನ ಪ್ರತೀಪರಾಜನು ಗಂಗಾತೀರದಲ್ಲಿ ಸೂರ್ಯನಿಗೆ ಅರ್ಘ್ಯಬಿಡುತ್ತಿದ್ದಾಗ, ನವಯೌವನೆಯಾದ ಸುಂದರಿಯೊಬ್ಬಳು ಶಂಕಾತಂಕಗಳೇನೂ ಇಲ್ಲದೆ ಆತನನ್ನು ಸಮೀಪಿಸಿದಳು. ಅವನು ಅವಳನ್ನು ಗಮನಿಸದೆ ಅರ್ಘ್ಯಬಿಟ್ಟು ಜಪ ಮಾಡಲು ಕುಳಿತುದೇ ತಡ, ಅವಳು ಸ್ವತಂತ್ರಳಾಗಿ ಅವನ ಬಲ ತೊಡೆಯ ಮೇಲೆ ಕುಳಿತುಬಿಟ್ಟಳು. ಅವಳನ್ನು ನೋಡಿ ಪ್ರತೀಪನು ಆಶ್ಚರ್ಯ ಪಡುತ್ತ, "ಅಮ್ಮಾ, ಯಾರು ನೀನು ? ಹೀಗೇಕೆ ಬಂದು ನನ್ನ ತೊಡೆಯ ಮೇಲೆ ಕುಳಿತೆ ? " ಎಂದು ಕೇಳಿದನು.



ಅವಳು ಕಿರುನಗುವಿನೊಂದಿಗೆ ಅವನ ಮುಖವನ್ನು ವಿಚಿತ್ರವಾಗಿ ನೋಡುತ್ತ "ನಾನು ಯಾರಾದರೇನಾಯಿತೀಗ? ಒಳ್ಳೆಯ ಹೆಣ್ಣು ಎಂಬುದು ಮಾತ್ರ ನಿಜ. ನೀನೋ ನವಮನ್ಮಥನ ಹಾಗಿರುವಿ. ನನ್ನ ಯೌವನವನ್ನು ನಿನಗೆ ಸಮರ್ಪಿಸಬೇಕೆಂತಲೇ ಬಂದಿದ್ದೇನೆ. ಸುಮ್ಮನೆ ಆಟದ ಬುದ್ಧಿಯಿಂದ ಹೇಳುತ್ತೇನೆ ಅಂದುಕೊಳ್ಳಬೇಡ" ಎಂದಳು.

"ಆದರ ಕ್ರಮದಲ್ಲೇ ತಪ್ಪಿದೆಯಲ್ಲ? ಬಲದ ತೊಡೆಯ ಮೇಲೆ ಕುಳಿತುಕೊಳ್ಳುವ ಅಧಿಕಾರ ನನ್ನ ಮಕ್ಕಳಿಗಷ್ಟೇ ಇರುತ್ತದೆ. ಆದುದರಿಂದ ನೀನು ನನಗೆ ಪತ್ನಿಯಾಗಲು ಸಾಧ್ಯವಿಲ್ಲ. ನನಗೊಬ್ಬ ಮಗನು ಹುಟ್ಟಿದ ಪಕ್ಷದಲ್ಲಿ, ಅವನಿಗೆ ನೀನು ಪತ್ನಿಯಾಗಿ ಬರುವೆಯಂತೆ. ನಿನ್ನಂಥ ದೇವತಾ ರೂಪಿಗಳಿಗೆ ಕಾಲಗತಿಯ ಪರಿಮಿತಿ ಇಲ್ಲವಷ್ಟೆ? ನನಗೆ ಈಗ ಮಕ್ಕಳೇ ಇಲ್ಲದಿದ್ದರೂ. ಅದಕ್ಕಾಗಿ ಚಿಂತಿಸಬೇಡ. ನಿನ್ನ ಪುಣ್ಯ ಒಳ್ಳೆಯದಾಗಿದ್ದರೆ ನನಗೆ ಸಂತಾನಯೋಗ ಬರಬಹುದು" ಎಂದು ಹೇಳಿ ಪ್ರತೀಪನು ಅವಳನ್ನು ಕಳುಹಿಸಿಬಿಟ್ಟನು.

ಅನಂತರ ಕಾಲಕ್ರಮದಲ್ಲಿ ಬ್ರಹ್ಮನಿಂದ ಶಾಪ ಪಡೆದ ಮಹಾಭಿಷನು ಪ್ರತೀಪರಾಜನಿಗೆ ಮಗನಾಗಿ ಶಂತನು ಎಂಬ ಹೆಸರಿನಿಂದ ದೊಡ್ಡವನಾದನು. ಶಂತನು ಪ್ರಾಯಪ್ರಬುದ್ಧನಾದ ಮೇಲೆ, ಪ್ರತೀಪನು ಶಂತನುವಿನೊಂದಿಗೆ ತನಗೆ ಅಪೂರ್ವ ಸ್ತ್ರೀಯೊಂದಿಗೆ ನಡೆದ ಸಂಭಾಷಣೆಯ ವಿವವರವನ್ನು ಹೇಳಿ, "ಅವಳ ಆಗಮನವನ್ನು ಇದಿರು ನೋಡಿಕೊಂಡಿರು. ಅವಳನ್ನೇ ಮದುವೆಯಾಗು" ಎಂದು ನಡಿದು ರಾಜ್ಯವನ್ನು ಅವನಿಗೆ ಒಪ್ಪಿಸಿಕೊಟ್ಟು, ತಾನು ತಪಸ್ಸು ಮಾಡಲು ಹೊರಟುಹೋದನು.

ಶಂತನು ತನ್ನ ತಂದೆಯಿಂದ ಬಂದ ರಾಜ್ಯವನ್ನು ಒಳ್ಳೆಯ ರೀತಿಯಲ್ಲಿ ಪಾಲಿಸುತ್ತ, ಒಂದು ದಿನ ಗಂಗಾನದೀ ತೀರದ ಕಾಡುಗಳಲ್ಲಿ ಬೇಟೆಯಾಡಲು ಹೋದನು. ಆ ಸಮಯದಲ್ಲಿ ದೇವತಾ ಸ್ತ್ರೀಯರನ್ನೂ ಮೀರಿಸುವಂತಹ ಸೌಂದರ್ಯದಿಂದ ಶೋಭಿಸುವ ಗಂಗಾದೇವಿ ಅವನ ಕಣ್ಣಿಗೆ ಬಿದ್ದಳು. ಇಷ್ಟೊಂದು ಸುಂದರಿಯಾದವಳು ಯಾರಿರಬಹುದೆಂದು ಅವನು ಆಶರ್ಯಪಡುತ್ತಿರಲು, ಅವಳೂ ಸಹ ಅವನ ಅಂದ ಚಂದ ಗಾಂಭೀರ್ಯಗಳನ್ನು ನೋಡಿ, ಮಹಾಭಿಷನ ರೂಪವು ಅವನಲ್ಲಿರುವುದನ್ನು ಕಂಡುಹಿಡಿದು, ಆನಂದದಿಂದ ನೋಡುತ್ತ ನಿಂತಳು.

ಶಂತನು ಅವಳ ಬಳಿಗೆ ಹೋಗಿ, "ಯಾರು ನೀನು? ಯಾರಾದರೇನಂತೆ? ನಿನ್ನ ಸೌಂದರ್ಯಕ್ಕಂತೂ ಈಡುಜೋಡಿಲ್ಲ. ನಿನ್ನನ್ನು ನೋಡಿದ ಕ್ಷಣದಿಂದಲೇ ನನ್ನ ಮನಸ್ಸು ನಿನ್ನಲ್ಲಿ ಸಿಕ್ಕಿಕೊಂಡಿತು. ನನ್ನನ್ನು ಮದುವೆಯಾಗುವೆಯಾ?" ಎಂದು ಕೇಳಿದನು.

ಇವನೇ ಮಹಾಭಿಷನೆಂದು ಗಂಗಾದೇವಿಗೆ ನಿಶ್ಚಯವಾಯಿತು. "ನಿನ್ನನ್ನು ನೋಡಿದ ಕೂಡಲೇ ನೀನು ಪ್ರತೀಪ ಮಹಾರಾಜನ ಮಗನೆಂದು ಗೊತ್ತಾ

ಯಿತು. ಇಷ್ಟು ದೊಡ್ಡ ವಂಶದವನನ್ನು ಮದುವೆಯಾಗಲು ಯಾವಳಾದರೂ ಇಷ್ಟವಿಲ್ಲವೆನ್ನುವಳೇ ? ನಾನು ಕೂಡಾ ನಿನ್ನನ್ನು ಮನಃಪೂರ್ವಕವಾಗಿಯೇ ಪ್ರೇಮಿಸುತ್ತೇನೆ. ಆದರೆ ಮುಂದಾಗಿ ಒಂದು ಸಂಗತಿಯನ್ನು ಸ್ಪಷ್ಟವಾಗಿ ಹೇಳಬೇಕಾಗಿದೆ. ಅದೇನೆಂದರೆ ನಾನು ಮಾಡುವ ಕೆಲಸ ಎಂತಹುದಾದರೂ ಸರಿ. ನೀನು ಅದನ್ನು ಕುರಿತು ಕೇಳಕೂಡದು; ತಡೆಯಲೂ ಬಾರದು. ನನಗೆ ಅಪ್ರಿಯವಾಗುವ ಹಾಗೆ ಏನೂ ಮಾತಾಡಬಾರದು. ಇದಕ್ಕೆ ಒಪ್ಪಿದರೆ ನೀನು ನನ್ನ ಪತಿಯಾಗಿ ಸುಖಸಂತೋಷವಾಗಿರಬಹುದು. ನನ್ನ ಈ ನಿಯಮಗಳಿಗೆ ಯಾವಾಗಲಾದರೂ ಭಂಗಬಂದರೆ ನಾನು ನಿನ್ನನ್ನು ಬಿಟ್ಟು ಹೊರಟು ಹೋಗಿ ಬಿಡುತ್ತೇನೆ. ಆ ಮೇಲೆ ನನ್ನನ್ನು ದೂರಿ ಪ್ರಯೋಜನವೇನಿಲ್ಲ." ಎಂದಳು. ವಸುಗಳು ತನ್ನ ಹತ್ತಿರ ಕೇಳಿಕೊಂಡ ಮಾತುಗಳನ್ನು ನೆನಪಿಟ್ಟುಕೊಂಡೇ ಅವಳು ಹಾಗೆ ಹೇಳಿದ್ದಳು.

ಅವಳ ನಿಯಮಗಳಿಗೆ ಶಂತನು ಒಪ್ಪಿದನು. ಗಂಗೆ ಕೂಡಾ ಬಹಳ ಕಾಲದಿಂದ ಅವನಲ್ಲಿ ಮನಸ್ಸಿಟ್ಟವಳಾದುದರಿಂದ, ಕೂಡಲೇ ಶಂತನುವನ್ನು ಗಾಂಧರ್ವ ವಿಧಿಯಿಂದ ಮದುವೆಯಾಗಿ, ಅವನೊಂದಿಗೆ ಅರಮನೆಗೆ ಬಂದಳು. ಗಂಗಾ ಶಂತನುಗಳ ಸಂಸಾರವು ಸುಖಸಂತೋಷಗಳಿಂದ ಸಾಗತೊಡಗಿತು.

ಶಂತನು ಪತ್ನಿಯಾದ ಗಂಗಾದೇವಿ ಮರುವರ್ಷದಲ್ಲೇ ಒಬ್ಬ ಮಗನನ್ನು ಹಡೆದಳು. ಕೂಡಲೇ ಆ ಮಗುವನ್ನು ಗಂಗಾ ನದಿಗೆ ಬಿಸುಟಳು. ಹೀಗೆ ವರ್ಷಕ್ಕೊಬ್ಬ ವಸುವನ್ನು ಮಗನಾಗಿ ಹಡೆದು ನದಿಗೆ ಹಾಕಿದಳು. ಏಳು ಮಂದಿ ವಸುಗಳೂ ಅವಳ ಗರ್ಭದಲ್ಲಿ ಮಾನವರಾಗಿ ಹುಟ್ಟಿ, ಕೂಡಲೇ ನೀರಿಗೆ ಬಿದ್ದು ಶಾಪಮುಕ್ತರಾಗಿ ಹೋದರು.

ಬಾರಿಬಾರಿಗೂ ಇದನ್ನು ನೋಡುತ್ತಾ ಇದ್ದ ಶಂತನುವಿಗೆ. ತುಂಬಾ ವೇದನೆಯಾಗುತ್ತಿತ್ತು. ಬಾಯಿ



ಯೆತ್ತಲಾಗದಂತೆ ಮಾತಿಗೆ ಕಟ್ಟುಬಿದ್ದಿದ್ದನು. ಗಂಗೆ ಏಳು ಮಂದಿ ಸುಂದರ ಶಿಶುಗಳನ್ನು ಹೆತ್ತು ದಯಾ ದಾಕ್ಷಿಣ್ಯಗಳಿಲ್ಲದೆ ಕೊಲ್ಲುತಿದ್ದಾಳಲ್ಲ ! ಇನ್ನು ಇವಳಿಂದ ತನ್ನ ವಂಶವು ನಿಲ್ಲುವ ಬಗೆಯುಂಟೆ ? ಹೀಗೇಕೆಂದು ಕೇಳಿಬಿಟ್ಟರೆ ಅವಳು ಹೊರಟೇ ಹೋಗುತ್ತಾಳೆ ! ಇಂತಹ ನಿಯಮಹೀನ ಮಾನವಾತೀತಳನ್ನು ಮಾಡಿಕೊಂಡರೆ ಹೀಗಾಗದೆ ಮತ್ತೇನಾದೀತು !

ಗಂಗಾದೇವಿ ಎಂಟನೇಸಾರಿ ಗರ್ಭಿಣಿಯಾಗಿದ್ದಳು. ಏನಾದರೂ ಸರಿಯೇ, ಈ ಸಾರಿ ಹುಟ್ಟುವ ಮಗುವನ್ನು ದಕ್ಕಿಸಿಕೊಳ್ಳಲೇ ಬೇಕು. ವಂಶಾಂಕುರಕ್ಕೆ ಬೇರೆ ದಾರಿಯಿಲ್ಲ. ಹೀಗೆ ಶಂತನು ದೃಢ ನಿಶ್ಚಿತನಾಗಿರಲು ಗಂಗೆ ಎಂಟನೇ ಮಗುವನ್ನೂ ಹಡೆದಳು. ಈ ಮಗುವೇ ಶಾಪಗ್ರಸ್ತನಾಗಿ ದೀರ್ಘ ಬ್ರಹ್ಮಚಾರಿಯಾಗಿರಬೇಕಾದ ಎಂಟನೇ ವಸು ಪ್ರಭಾಸನು. ಹೆತ್ತ ಕೂಡಲೇ ಈ ಮಗುವನ್ನು ಕೂಡಾ ಗಂಗೆ ನದಿಯಲ್ಲಿ ಹಾಕಲು ಹೊರಟಳು.

ಆಗ ಶಂತನು ಅವಳೊಂದಿಗೆ ಬಹಳ ವಿನಯದಿಂದ, "ನಾನು ಯಾವಾಗಲೂ ನಿನಗೆ ವಶನಾಗಿರುವವನು. ನನ್ನ ಮಾತನ್ನು ಅಲಕ್ಷ್ಯಮಾಡಬೇಡ. ಹೊಟ್ಟೆಯಲ್ಲಿ ಹೊತ್ತು ಕಷ್ಟಪಟ್ಟು ಹಡೆದ ಮಗನನ್ನು ನೀನೇ ಕಯ್ಯಾರೆ ಕೊಲ್ಲುವುದು ಯಾವ ನ್ಯಾಯ? ನಿನಗೆ ಯಾವ ದ್ರೋಹವನ್ನೂ ಮಾಡದ ಮಗುವನ್ನು ಸುಮ್ಮನೆ ಕೊಲ್ಲುವುದುಂಟೆ? ನಿನಗೆ ಮಾತು ಕೊಟ್ಟಿರುವೆನೆಂಬ ದೋಷಕ್ಕಾಗಿ ವಂಶನಾಶನಮಾಡಿಕೊಳ್ಳಬೇಕೆನ್ನುವಿಯಾ? ಏಳು ಮಕ್ಕಳನ್ನು ಕೊಂದಾಯಿತು. ಇವನನ್ನಾದರೂ ಬದುಕಲು ಬಿಡು." ಎಂದು ವಿಧವಿಧವಾಗಿ ಹೇಳಿಕೊಂಡನು.

ಆದರೆ ಗಂಗಾದೇವಿ ಅವನ ಮಾತನ್ನು ಕೇಳದವಳಂತೆಯೇ ಮಗುವನ್ನು ಕೊಲ್ಲಲು ನಡೆದೇ ನಡೆದಳು. ಶಂತನು ತಾಳಲಾರದಷ್ಟು ಕೋಪದಿಂದ ಅವಳನ್ನು ಅಡ್ಡಗಟ್ಟಿ, "ಎಲಗೇ ದುಷ್ಟಳೇ! ನಿನಗೆ ಗಂಡನ ಮಾತಿನ ಮೇಲೆ ಲಕ್ಷ್ಯವಿಲ್ಲ! ನರಕದ ಭೀತಿ ಮೊದಲೇ ಇಲ್ಲ. ಹೆತ್ತ ಮಗುವನ್ನು ಗಂಗೆಯಲ್ಲಿ ಬಿಸುಟು ಕೊಲ್ಲುವ ನಿನ್ನನ್ನು ಯಾವ ದುಷ್ಟನು ಹಡೆದನೋ? ನೀನು ಇದ್ದರೆ ಇರು, ಹೋದರೆ ಹೋಗು. ಈ ಸಾರಿ ಮಾತ್ರ ಈ ಮಗುವನ್ನು ಕೊಲ್ಲಲು ಬಿಡಲಾರೆ! ನಿಲ್ಲಲ್ಲೆ!" ಎಂದನು. ಆಗ ಗಂಗಾದೇವಿ ಶಾಂತ ಮಂದಸ್ಮಿತಳಾಗಿ, ಒಂದಿಷ್ಟೂ ಕೋಪವಿಲ್ಲದೆ, "ರಾಜಾ, ವಿಧಿನಿಯಮಕ್ಕೆ ನಾವೆಲ್ಲರೂ ಒಳಗಾದವರೇ. ನೀನು ನನಗೆ ಕೊಟ್ಟ ಮಾತನ್ನು ಮೀರುವುದರಿಂದ, ಇನ್ನು ನನ್ನ ನಿನ್ನ ಋಣ ಮುಗಿಯಿತು. ನಿನ್ನಂತಹ ಉತ್ತಮನನ್ನು ಬಿಟ್ಟು ಹೋಗುವುದು ಧರ್ಮವಲ್ಲವಾದರೂ ಅದಕ್ಕೆ ಕಾರಣವನ್ನು ನಾನೀಗ ನಿನಗೆ ಹೇಳಬೇಕು. ನಾನು ಎಲ್ಲರ ಹಾಗಿನ ಸ್ತ್ರೀಯಲ್ಲ, ಒಂದು ದೇವ ಕಾರ್ಯದ ನಿಮಿತ್ತವಾಗಿಯೇ ನಿನ್ನನ್ನು ವರಿಸಿದೆನು. ಋಷಿಯ ಶಾಪದಿಂದ ಅಷ್ಟ ವಸುಗಳು ಮಾನವ ಜನ್ಮ ಎತ್ತಬೇಕಾಗಿ ಬಂತು. ನಿನ್ನ ಮೂಲಕ ನಾನು ಅವರಿಗೆ ತಾಯಿಯಾಗಲು ಒಪ್ಪಿದೆನು. ಅವರು ಮಾನವರಾಗಿ ಭೂಮಿಯಲ್ಲಿರಲು ಇಷ್ಟಪಡದವರಾದ್ದರಿಂದ ಹುಟ್ಟಿದ ಕೂಡಲೇ ಶಾಪ ವಿಮುಕ್ತಿ ಮಾಡಬೇಕೆಂದು ನನ್ನನ್ನು ಬೇಡಿಕೊಂಡರು. ಅದಕ್ಕಾಗಿಯೇ ನಾನು ಪಾಪ ಪುಣ್ಯಗಳ ವಿಚಾರವಿಲ್ಲದೆ ಹುಟ್ಟಿದ ಕೂಡಲೇ ನೀರಿಗೆ ಹಾಕಿಬಿಟ್ಟೆನು. ಈಗ ಹುಟ್ಟಿದವನು ಎಂಟನೇ ವಸು. ಇವನು ಚಿರಂಜೀವಿಯಾಗಿ ಬದುಕಿದ್ದು ನಿನಗೆ ಕೀರ್ತಿ ತರುವನು. ಈಗ ಇವನನ್ನು ಪ್ರಾಯಕ್ಕೆ ಬರುವವರೆಗೆ ನನ್ನ ಬಳಿಯಲ್ಲೇ ಇಟ್ಟುಕೊಂಡು, ಆ ಮೇಲೆ ಕರೆ ತಂದು ನಿನಗೆ ಒಪ್ಪಿಸುತ್ತೇನೆ. ಎಂದು ಹೇಳಿ ಆ ಮಗುವನ್ನು ಎತ್ತಿಕೊಂಡು ಹೊರಟುಹೋದಳು.



# ಉಂಗುರದ ಮಹಿಮೆ

ಉಂಗುರದ ಮಹಿಮೆ

ವಿಜಯವರ್ಮನೆಂಬ ಸಾಮಂತ ರಾಜನ ಹತ್ತಿರ ಒಂದು ವಜ್ರದ ಉಂಗುರವಿದ್ದಿತು.

ಅದೊಂದು ಮಹಿಮೆಯ ಉಂಗುರವೆಂದೂ, ಅದನ್ನು ಧರಿಸಿದವರಿಗೆ ಪ್ರಾಣಭಯವಿಲ್ಲವೆಂದೂ ಪ್ರತೀತಿ.

ಅದನ್ನು ಕೇಳಿ ಆ ದೇಶವನ್ನಾಳುವ ಮಹಾರಾಜನು ವಿಜಯವರ್ಮನನ್ನು ಕರೆಯಿಸಿ, ಅವನ ವಜ್ರದ ಉಂಗುರವನ್ನು ತನಗೆ ಯಾವ ಬೆಲೆಗಾದರೂ ಮಾರುವಂತೆ ಕೇಳಿದನು.

ವಿಜಯವರ್ಮನು ಅದನ್ನು ಮಾರಲು ಒಪ್ಪದೆ, "ಮಹಾರಾಜರೆ, ಪ್ರಾಣಕ್ಕಿಂತಲೂ ಹಣವು ಹೆಚ್ಚಿನದಲ್ಲ. ನನ್ನಲ್ಲಿ ಪ್ರಾಣವಿರುವಾಗ ನಾನಿದನ್ನು ಯಾರಿಗೂ ಕೊಡಲಾರೆ" ಎಂದನು.

ರಾಜನು ವಿಜಯವರ್ಮನನ್ನು ಕಳುಹಿಸಿ, ಮಂತ್ರಿಯೊಂದಿಗೆ, ವಿಜಯವರ್ಮನನ್ನು ಕೊಲ್ಲಿಸಿ ಆ ವಜ್ರದುಂಗುರವನ್ನು ತರಲು ಅಪ್ಪಣೆ ಮಾಡಿದನು. ಅದು ಒಳ್ಳೆಯ ಕೆಲಸವಲ್ಲವೆಂದು ಮಂತ್ರಿ ರಾಜನಿಗೆ ಉಪದೇಶ ಮಾಡಲು, ರಾಜನು ಸೇನಾಪತಿಗೆ ಆ ಕಾರ್ಯ ಒಪ್ಪಿಸಿಕೊಟ್ಟನು. ಸೇನಾಪತಿ ಸ್ವಲ್ಪ ಸೇನೆಯೊಂದಿಗೆ ಹೋಗಿ ವಿಜಯವರ್ಮನನ್ನು ಕೊಂದು, ವಜ್ರದುಂಗುರವನ್ನು ತಂದನು. ರಾಜನು ಮಂತ್ರಿಯನ್ನು ಕರೆದು, ತನ್ನ ಸೇನಾಪತಿ ವಿಜಯವರ್ಮನನ್ನು ಕೊಂದು ವಜ್ರದುಂಗುರವನ್ನು ತಂದುದಕ್ಕೆ ಅವನನ್ನು ಸನ್ಮಾನಿಸಲು ಬೇಕಾದ ಏರ್ಪಾಡುಗಳನ್ನು ಮಾಡಲು ಹೇಳಿದನು.

"ಮಹಾರಾಜಾ, ಆ ಉಂಗುರದಲ್ಲಿ ನಿಜಕ್ಕೂ ಮಹಿಮೆಯಿದ್ದರೆ ನಮ್ಮ ಸೇನಾಪತಿ ವಿಜಯವರ್ಮನನ್ನು ಹೇಗೆ ಕೊಂದ ? ವಿಜಯವರ್ಮನನ್ನು ಕೊಲೆಮಾಡಿ ಬಂದ ಸೇನಾಪತಿಗೆ ಸನ್ಮಾನವೆಂದರೇನು ? " ಎಂದು ಕೇಳಿದನು. ರಾಜನ ಮುಖ ಪೆಚ್ಚಾಯಿತು.





# ಪಿಶಾಚಿಗಳ ಸ್ನೇಹ

ಚಂದ್ರಕಾಂತನು ರುಕ್ಮಿಣಿ ಎಂಬ ಹುಡುಗಿಯನ್ನು ಮೆಚ್ಚಿ ಮದುವೆಯಾಗಿದ್ದನು. ರುಕ್ಮಿಣಿ ಮದುವೆಯಾಗುವ ಮೊದಲಿನಿಂದಲೇ ಹೃದಯದಲ್ಲಿ ಕೆಲವು ಕೋರಿಕೆಗಳನ್ನು ಹುದುಗಿಸಿದ್ದಳು. ಅವಳು ತಂದೆ ತಾಯಿಗಳೊಂದಿಗೆ ಒಳ್ಳೊಳ್ಳೆಯ ಸೀರೆಗಳನ್ನೂ ನಗಗಳನ್ನೂ ಕೇಳುತ್ತಿದ್ದಳು. ಅಷ್ಟೇನೂ ಸ್ಥಿತಿವಂತರಲ್ಲದ ತಂದೆ ತಾಯಿಗಳು, "ನಿನಗೊಂದು ಮದುವೆಯಾದ ಮೇಲೆ, ನಿನಗೆ ಬೇಕಾದುದನ್ನೆಲ್ಲಾ ಗಂಡನನ್ನು ಕೇಳು. ತೆಗೆದು ಕೊಡುತ್ತಾನೆ" ಎನ್ನುತ್ತಿದ್ದರು. ಆದರಿಂದ ಅವಳಿಗೆ ಗಂಡನೆಂದರೆ ಕೇಳಿದುದನ್ನೆಲ್ಲ ತಂದು ಕೊಡುವವನೆಂಬ ಅಭಿಪ್ರಾಯ ಉಂಟಾಗಿತ್ತು.

ಆದರೆ ಚಂದ್ರಕಾಂತನ ಉದ್ಯೋಗವು ಸಣ್ಣದೇ, ಅನಾಥನಾಗಿದ್ದ ಅವನನ್ನು ಅಜ್ಜಿಯೇ ಸಲಹಿ ಸಾಕುತ್ತ ಭೂಮಿಯಲ್ಲಿ ನಿಧಿ ಸಿಗುವ ಕಥೆಗಳನ್ನೂ. ದೆವ್ವಗಳ ಕಥೆಗಳನ್ನೂ ತುಂಬಾ ಹೇಳಿ ಕಿವಿ ತುಂಬಿಸಿದ್ದಳು. ತನಗೆ ಕೂಡಾ ಎಂದಾದರೂ ಯಾವುದಾದರೂ ನಿಧಿ ಸಿಗುತ್ತದೆಂಬ ಭ್ರಮೆ ಅವನಲ್ಲಿ ಉಂಟಾಗಿತ್ತು. ಕೆಲವು ಕಥೆಗಳಲ್ಲಿ ಪಿಶಾಚಿಗಳ ಸಹಾಯದಿಂದ ನಿಧಿ ಸಿಕ್ಕಿರುವುದನ್ನು ಕೇಳಿದ್ದ. ಆದುದರಿಂದ ಅವನು ಪಿಶಾಚಿಗಳ ಸಹಾಯದಿಂದ ನಿಧಿಯನ್ನು ಸಂಪಾದಿಸಬಹುದೆಂದು ಕೊಂಡನು. ಅದಕ್ಕಾಗಿಯೇ ರಹಸ್ಯವಾಗಿ ಸ್ಮಶಾನದಲ್ಲಿ ಎಡತಾಕಿ ಕೊಂಡಿರುವನು. ಪಿಶಾಚಿಗಳು ಸ್ಮಶಾನದಲ್ಲೇ ಇರುತ್ತವಂತೆ. ಮದುವೆಯಾಗುವುದಕ್ಕೆ ಮೊದಲು ಊರೊಳಗೆ ಒಂದು ಕೋಣೆಯಲ್ಲಿ ಬಿಡಾರವಿದ್ದ ಚಂದ್ರಕಾಂತನು ಮದುವೆಯಾದ ಮೇಲೆ ಸ್ಮಶಾನದ ಹತ್ತಿರದಲ್ಲಿದ್ದ ಒಂದು ಪಾಳು ಮನೆಯನ್ನೇ ಸರಿಪಡಿಸಿ. ಸಂಸಾರ ಹೂಡಿದ್ದನು.

"ಇದೆಂಥಾ ಮನೆಯೋ! ಮಸಣದ ಹಾಗಿದೆ. ಊರ ನಡುವೆ ಒಳ್ಳೇ ಮನೆ ಕಟ್ಟಿಕೊಳ್ಳೋಣ. ಇಂಥಾ ಕೊಂಪೆಯಲ್ಲಿರಲು ನನ್ನಿಂದಾಗದಪ್ಪ" ಎಂದಳು ರುಕ್ಮಿಣಿ ಆ ಮನೆಯನ್ನು ನೋಡಿದಾಗಲೇ.

ಅವಳ ಮಾತು ಕೇಳಿ ಚಂದ್ರಕಾಂತ ಆಶ್ಚರ್ಯಪಡುತ್ತ, "ಮನೆ ಕಟ್ಟುವುದು ಅಂದರೆ ಹಕ್ಕಿ ಗೂಡು ಕಟ್ಟುವುದು ಅಂತ ಮಾಡಿದಿಯೇನೇ? ನಮಗೇನಾದರೂ ನಿಧಿ ದೊರಕಲಿ." ಎಂದನು.

"ನಿಧಿ ಸಿಗುವುದು ಅಂದರೆ ನೀರು ಸಿಗುವ ಹಾಗೇ ಅಂದುಕೊಂಡಿರಾ?" ಎಂದು ರುಕ್ಮಿಣಿ ಕಿವಿದ ಹಾಗೆ ಕೇಳಿದಳು. "ನೋಡುತ್ತಿರು. ನಿನಗೇ ಗೊತ್ತಾಗು

ಎಂ. ಕೆ. ಈಶ್ವರರಾವ್

ತ್ತದೆ." ಎಂದು ಆವಳ ಬಾಯಿ ಮುಚ್ಚಿಸಿದ ಚಂದ್ರಕಾಂತ. ಆ ದಿನ ರಾತ್ರಿ ಯಾವುದೋ ಶಬ್ದವು ರುಕ್ಮಿಣಿಯನ್ನು ಹೊಡೆದೆಬ್ಬಿಸಿದಂತೆ ಎಬ್ಬಿಸಿತು.

ಸ್ಮಶಾನದ ಕಡೆಯಿಂದ ಏನೇನೋ ಕೋಲಾಹಲವು ಕೇಳಿ ಬರುತ್ತಿತ್ತು. ಅವಳು ಗಂಡನನ್ನು ತಟ್ಟಿ ಎಬ್ಬಿಸಿ, "ಅದೇನು ಗಲಾಟೆ?" ಎಂದಳು.

"ಓಹೋ! ಪಿಶಾಚಗಳ ಹಾಗಿದೆ! ಬಿಡಬಾರದು! ಇರು, ನಾನು ಅವುಗಳ ಹತ್ತಿರ ಮಾತಾಡಿ ಬರುತ್ತೇನೆ" ಎಂದು ಚಂದ್ರಕಾಂತನು ಎದ್ದನು.

ರುಕ್ಮಿಣಿ ಹೆದರಿಬಿದ್ದು, "ಅಯ್ಯಯ್ಯೋ! ನಿಮಗೇನಂದರೂ ಬುದ್ಧಿ ಕೆಟ್ಟಿತೇ? ಪಿಶಾಚಿಗಳೊಂದಿಗೆ ಮಾತಾಡುವುದೆಂದರೇನು? ಸುಮ್ಮನಿರಿ. ನಾಳೆಯೇ ಈ ಮನೆ ಖಾಲೀ ಮಾಡಿ ಎಲ್ಲಿಗಾದರೂ ಹೋಗೋಣ!" ಎಂದಳು.

"ನಿನಗಿರುವ ಬುದ್ಧಿಯೇ ಇಷ್ಟು. ಆ ಪಿಶಾಚಿಗಳ ಸ್ನೇಹಕ್ಕಾಗಿಯೇ ನಾನು ಈ ಸ್ಮಶಾನದ ಹತ್ತಿರ ಮನೆ ಮಾಡಿದ್ದೇನೆ ಗೊತ್ತಾ? ಅವು ಸುಮ್ಮನೆ ಗಲಾಟೆ ಮಾಡುತ್ತವೆಯೇ ಹೊರತು ಕೆಡುಕು ಮಾಡುವುದಿಲ್ಲ. ಅವುಗಳೊಂದಿಗೆ ಸ್ನೇಹ ಮಾಡಿಕೊಂಡರೆ ನಿಧಿ ನಿಕ್ಷೇಪಗಳ ರಹಸ್ಯಗಳನ್ನು ಹೇಳುತ್ತವೆ." ಎಂದು ಚಂದ್ರಕಾಂತನು ಸ್ಮಶಾನದಕಡೆಗೆ ಹೋದನು.

ಸ್ಮಶಾನದ ಮುಂದಿನ ಭಾಗದಲ್ಲೇ ಇದ್ದ ಒಂದು ಗೋಳೀಮರದ ಮೇಲೆ ಎರಡು ಪಿಶಾಚಿಗಳು ಕೇಕೇ ಹಾಕಿಕೊಂಡು ಕೊಂಬೆಗಳ ಮೇಲೆ ಹಾರಿ ಹಾರಿ ಕುಣಿಯುತ್ತಿದ್ದುವು. ಅವು ಚಂದ್ರಕಾಂತನನ್ನು ನೋಡಿದ ಕೂಡಲೇ, "ಯಾರದು? ಇಲ್ಲಿಗೆ ಬರಲು ನಿನಗೆಷ್ಟು ಧೈರ್ಯ! ನೀನು ಬದುಕಿರುವ ನರ ಮನುಷ್ಯ ತಾನೇ?" ಎಂದು ಕೇಳಿದುವು.

"ಹೌದು ಮನುಷ್ಯನೇ. ಧೈರ್ಯದಿಂದ ಬಂದೆ ಎಂದು ಕೊಳ್ಳಬೇಡಿ. ನನಗೆ ನೀವೆಂದರೆ ತುಂಬ ಇಷ್ಟ.



ಮನುಷ್ಯರಿಗಿಂತ ನೀವೇ ಸ್ನೇಹಕ್ಕೆ ಉತ್ತಮರು. ಆದಕ್ಕೇ ಬಂದಿದ್ದೇನೆ." ಎಂದ ಚಂದ್ರಕಾಂತ.

"ಹಾಗಾದರೆ ಸರಿ." ಎಂದು ಪಿಶಾಚಿಗಳು ಅವನ ಮುಂದೆ ಬಂದು ಸ್ವಲ್ಪ ಹೊತ್ತು ಅದೂ ಇದೂ ಕೇಳಿ ಹರಟೆ ಹೊಡೆದು ಅವನನ್ನು ನಗಿಸಿದುವು. ಅವು ಹೊತ್ತಾಯಿತೆಂದು ಮಾಯವಾದಮೇಲೆ ಚಂದ್ರಕಾಂತನು ಮನೆಗೆ ಹಿಂದಿರುಗಿದನು.

ಹೃದಯವು ಪಿಕಿಪಿಕಿ ಎನ್ನುತ್ತಿರಲು ಗಂಡನ ದಾರಿಯನ್ನು ನೋಡುತ್ತಿರುವ ರುಕ್ಮಿಣಿ ಗಂಡನು ಕ್ಷೇಮವಾಗಿ ಬಂದುದನ್ನು ನೋಡಿ, "ನಿಮಗೇನೂ ಆಗಿಲ್ಲ ವಷ್ಟೆ? ಪಿಶಾಚಿಗಳು ಕಂಡವೇನು? ನಿಧಿನಿಕ್ಷೇಪಗಳ ಮಾತು ಬಂತೇನು?" ಎಂದು ಕೇಳಿದಳು.

"ಆಗಲೇನಾ? ನಮ್ಮ ಸ್ನೇಹ ಸ್ವಲ್ಪ ಗಟ್ಟಿಯಾಗಲಿ. ತಡೆದುಕೋ" ಎಂದ ಚಂದ್ರಕಾಂತ. ರುಕ್ಮಿಣಿಗೂ ಧೈರ್ಯಬಂತು. ಆ ಮನೆಯನ್ನು ಬಿಡಬೇಕೆಂಬ ಮಾತನ್ನು ಬಿಟ್ಟಳು.

ಚಂದ್ರಕಾಂತನು ದಿನಾರಾತ್ರಿ ಸ್ಮಶಾನದ ಪಿಶಾಚಿಗಳನ್ನು ಕಲೆತುಕೊಂಡು ಅವುಗಳೊಂದಿಗೆ ಸ್ವಲ್ಪ ಹೊತ್ತು ಕಾಲಕ್ಷೇಪಮಾಡಿ ಬರುತ್ತಿದ್ದನು. ಒಂದು ದಿನ ಅವನು ಹೆಂಡತಿಯೊಂದಿಗೆ, "ನಾಳೆ ಪಿಶಾಚಿಗಳನ್ನು ನಮ್ಮ ಮನೆಗೆ ಔತಣಕ್ಕೆ ಕರೆಯುತ್ತೇನೆ. ಸ್ವಲ್ಪ ಜೋರಾಗಿ ಅಡಿಗೆ ಮಾಡಿಡು." ಎಂದನು. ಬೇಕಾದ ಸಾಮಾನುಗಳನ್ನೂ ತಂದು ಹಾಕಿದನು.

ಪಿಶಾಚಿಗಳು ಚಂದ್ರಕಾಂತನ ಆಹ್ವಾನವನ್ನು ಮನ್ನಿಸಿ ಮಧ್ಯರಾತ್ರಿಯ ಹೊತ್ತಿಗೆ ಅವನ ಮನೆಗೆ ಊಟಕ್ಕೆ ಬಂದುವು. ರುಕ್ಮಿಣಿ ಅವುಗಳಿಗೆ ಬಡಿಸಿದಳು, ಆಗ ಚಂದ್ರಕಾಂತನು ಅವುಗಳೊಂದಿಗೆ, "ನಿಮಗೆ ಇನ್ನೂ ಅದ್ಭುತವಾದ ಔತಣವನ್ನು ಮಾಡಿಸುತ್ತಿದ್ದೆ, ಆದರೆ ನಾನು ಬಡವ, ಎಲ್ಲಿಯಾದರೂ ನಿಧಿ ನಿಕ್ಷೇಪ ಸಿಗುವ ದಾರಿ ಇದ್ದರೆ ಹೇಳುವಿರಾ ? ದಿನಾ ನಿಮಗೆ ರಾಜೋಪಚಾರ ಮಾಡಿ ಬಡಿಸುತ್ತೇವೆ." ಎಂದನು.

ಪಿಶಾಚಿಗಳು ಅವನ ಮಾತು ಕೇಳಿ ಆಶ್ಚರ್ಯಪಡುತ್ತ, "ಎಂಥಾ ಮಾತು ಹೇಳಿಬಿಟ್ಟೆಯೋ ಪಾಪದ ಮನುಷ್ಯಾ ! ನಾವು ಹೀಗೆ ಪಿಶಾಚಿಗಳಾಗಿ ಅಲೆಯಲು ಕಾರಣವೇನೆಂದುಕೊಂಡೆ ? ನಿನ್ನ ಹಾಗೆ ನಿಧಿ ನಿಕ್ಷೇಪಗಳಿಗಾಗಿ ಕಾಡುಗಳಲ್ಲಿ, ಪಾಳು ಬಿದ್ದ ಗುಡಿ ಗುಂಡಾರಗಳನ್ನು ಅಗೆಯುತ್ತಾ, ಒಂದು ಗೋಡೆ ಬಿದ್ದು ಸತ್ತು ಹೋಗಿ ಹೀಗೆ ಪಿಶಾಚಿಗಳಾಗಿ ಗತಿ ತಪ್ಪಿ ಸುತ್ತಾಡಿ ಕೊಂಡಿದ್ದೇವೆ ! ಬೇಡಪ್ಪಾ ಅಂಥ ಯೋಚನೆ !" ಎಂದುವು.

"ಹಾಗಾದರೆ ನನಗೆ ನಿಧಿ ಸಿಗುವುದೇ ಇಲ್ಲವೆಂದಾಯಿತು." ಎಂದ ಚಂದ್ರಕಾಂತ ಬೆಪ್ಪು ಬಡಿದವನಂತೆ ನೋಡುತ್ತ.

"ಅದಕ್ಕೇಕೆ ಕೊಂಪೆ ಮುಳುಗಿದವನಂತೆ ನೋಡುವೆಯೋ ಮನುಷ್ಯಾ ? ನಿಧಿಯೇ ಸಿಕ್ಕಿಬಿಟ್ಟರೆ ಅದರಲ್ಲಿ ನಿನ್ನ ಪ್ರಯತ್ನವೇನು ಬಂತು ? ನೀನಾಗಿ ಸ್ವಂತ ಕಾರ್ಯದಿಂದ ಸಾಧಿಸಿಕೊಂಡರೆ ಅದೇ ನಿಧಿ !" ಎಂದು ಹೇಳಿ ಪಿಶಾಚಿಗಳು, "ಇನ್ನು ಇವನ ಸಾವಾಸದಲ್ಲಿದ್ದರೆ ನಮ್ಮ ಪಿಶಾಚಿ ಜನ್ಮ ಹೋಗಲಿಕ್ಕೇ ಇಲ್ಲ ! ಸಾಕು ಈ ನರನ ಸಾವಾಸ !" ಎಂದುಕೊಂಡು ಥಕ್ಕನೆ ಮಾಯವಾಗಿ ಹೋದುವು.

ಚಂದ್ರಕಾಂತನಿಗೆ ಬುದ್ಧಿ ಕಲಿಸಲಿಕ್ಕಾಗಿಯೇ ಆ ಪಿಶಾಚಿಗಳು ಬಂದ ಹಾಗೆ. ಆಮೇಲೆ ಅವನ ಕಣ್ಣಿಗೆ ಬೀಳಲೇ ಇಲ್ಲ. ಅವನಿಗೂ ನಿಧಿ ನಿಕ್ಷೇಪಗಳ ಹುಚ್ಚು ಬಿಟ್ಟು ಹೋಯಿತು. ಮತ್ತೊಂದು ವಾರದೊಳಗೆ ಸ್ಮಶಾನದ ಬದಿಯಲ್ಲಿದ್ದ ಮನೆಯನ್ನು ಖಾಲಿ ಮಾಡಿ ಊರೊಳಗೆ ಒಂದು ಮನೆಯನ್ನು ಬಾಡಿಗೆಗೆ ಪಡೆದುಕೊಂಡನು. ಅಂದಿನಿಂದ ಅವನು ತನ್ನ ಶಕ್ತಿಯಲ್ಲಿ ನಂಬುಗೆಯಿಟ್ಟು ಕೆಲಸ ಮಾಡುತ್ತ ಸಾರ್ಥಕ ಜೀವನವನ್ನು ನಡೆಸಿದನು.





# ಕರಡಿಕೆಂಗಣ್ಣಿ

ಕರಡಿ ಕೆಂಗಣ್ಣ April 1979

[ಅಂಗರಕ್ಷಕನು ಆನೆಯಿಂದ ತಪ್ಪಿಸಿಕೊಂಡು ಓಡುತ್ತಾ ಉಗ್ರದಂಡ ರಾಕ್ಷಸನ ಬಳಿಗೆ ಬಂದ ಸಮಯದಲ್ಲಿ, ದುರ್ಮುಖರಾಜನು ಮೂರ್ಛೆಯಿಂದೆದ್ದು, ಅರಣ್ಯದೊಳಗೆ ಓಡಿಹೋದನು. ಅಲ್ಲಿ ಅವನ ಮೇಲೆ ಒಂದು ಚಿರತೆ ಹಾರಲು ಹೊಂಚು ಹಾಕಿಕೊಂಡಿರುವಾಗ ಆಟವಿಕನೊಬ್ಬ ಚಿರತೆಯನ್ನು ಬಾಣದಿಂದ ಹೊಡೆದನು. ಆ ಪೆಟ್ಟಿಗೆ ಚಿರತೆಯೊಂದಿಗೆ ದುರ್ಮುಖರಾಜನೂ ಕೆಳಗೆಬಿದ್ದನು.]

ದುರ್ಮುಖ ರಾಜನೂ ಚಿರತೆಯೂ ಒಟ್ಟಿಗೇ ಕೆಳಗೆ ಬಿದ್ದುದನ್ನು ನೋಡಿದವರಿಗೆ ರಾಜನ ಇತಿಶ್ರೀ ಯಾಯಿತೆಂದೇ ತೋರಿತು. ಚಿರತೆಯ ಕಿಬ್ಬದಿಗೆ ಬಾಣವು ನಾಟಿತ್ತು.

ಅದು ರೋಷದಿಂದ ಹಾರಿ ತುಳ್ಳುತ್ತಿರಲು, ದುರ್ಮುಖರಾಜನು ಪುಣ್ಯವಶಾತ್ ಒಂದು ಪೊದರಿನ ಮೇಲೆ ಬಿದ್ದು ಅಲ್ಲಿಂದ ನೆಲಕ್ಕೆ ಜಾರಿಬಿಟ್ಟುದರಿಂದ ಬಲವಾದ ಗಾಯಗಳೇನೂ ಆಗದೆ ಆ ಗಂಡದಿಂದ ಸದ್ಯಕ್ಕೆ ಪಾರಾಗಿದ್ದನು. ಚಿರತೆ ಇನ್ನೂ ಎಗರಾಡುವುದನ್ನು ನೋಡಿ ಅಂಗರಕ್ಷಕನು, ಕೈಕಾಲು ಹಾರಿಸುತ್ತ ಆಟವಿಕನನ್ನು ನೋಡಿ. "ಎಲೋ, ಹಾಗೇನು ನೋಡುವಿ? ಇನ್ನೊಂದು ಬಾಣ ಹೊಡೆದು ಆ ಚಿರತೇನ ಕೊಲ್ಲೋ! ಅರ್ಧಕೊಂದು ಸುಮ್ಮನೆ ನೋಡುವಿಯಲ್ಲಾ!" ಎಂದು ಕೂಗಿದನು.

ಪುನಃ ಅಂಗರಕ್ಷಕನು ರಾಜನನ್ನು ನೋಡಿ ಕುಣಿಯುತ್ತ, "ಮಹಾರಾಜರೇ! ಇದೆಂಥಾ ಚಿರತೆಯೋ! ಅಂಥಾ ಬಾಣ ಮೊಳದಷ್ಟು ಚುಚ್ಚಿಕೊಂಡರೂ ಇನ್ನೂ ನಿಮ್ಮ ಮೇಲೆ ಹಾರಲಿಕ್ಕೆ ನೋಡುತ್ತದಲ್ಲಾ? ಈಗ ಏನು ಮಾಡುವುದಪ್ಪಾ!



ಹೇಗಾದರೂ ಆಚೆಗೆ ಓಡಿಬಿಡಿ ಮಹಾರಾಜರೆ!" ಎಂದು ಕಿರಿಚಿದನು.

ದುರ್ಮುಖರಾಜನು ಚಿರತೆಯ ಅಳವಿನಿಂದ ದೂರ ಹೋಗುತ್ತ, ಅಂಗರಕ್ಷಕನನ್ನು ನೋಡಿ ಕೋಪದಿಂದ, "ಎಲೋ! ಕೈಲಾಗದ ಭಂಡಾ! ನಿನಗೇನಾದರೂ ಬುದ್ಧಿಗಿದ್ಧಿ ಇದೆಯೇ? ಸೊಂಟದ ಕತ್ತಿ ತೆಗೆದು ಅದರ ತಲೆ ಕಡಿಯೋ! ಪಿಳಿಪಿಳಿ ನೋಡುವ ಈ ಆಟವಿಕನಾವನು? ನಮ್ಮ ರಾಜ್ಯದವನೇನಾ? ಅವನಿಗೂ ಬುದ್ಧಿ ಇಲ್ಲ! ಬೇಗ ಅದರ ಕೆಲಸ ಮುಗಿಸುವುದು ಬಿಟ್ಟು ನೋಡುತ್ತಿದ್ದಾನೆ ಆಟ!" ಎಂದನು.

ಚಿರತೆ ದುರ್ಮುಖನ ಹತ್ತಿರವಾಗಿಯೇ ನೆಗೆದಾಡುತ್ತಿತ್ತು. ಅದು ಅಡಿಗಡಿಗೂ ಕೋರೆ ಹಲ್ಲುಗಳನ್ನು ತೋರಿಸಿ ಅವನ ಕಡೆಗೇ ಕುಪ್ಪಳಿಸುತಿತ್ತು. ಆಗಿನಿಂದಲೂ ನಡೆಯುವುದನ್ನು ಮೌನವಾಗಿ ನೋಡಿಕೊಂಡಿದ್ದ ಆಟವಿಕನು ಏನನ್ನೋ ತಿಳಿದುಕೊಂಡವನಂತೆ, ತಲೆಯಾಡಿಸಿ ಸಣ್ಣ ನಗೆ ನಕ್ಕು, "ನನಗೆ ಹೆಚ್ಚಿಗೆ ಏನೂ ಗೊತ್ತಿಲ್ಲದಿದ್ದರೂ ವರಹಗಳೆಂದರೆ ಏನೆಂದು ತಿಳಿಯದವನಲ್ಲ. ನನಗೆ ಐದು ವರಹ ಕೊಡುವೆನೆಂದೆಯಲ್ಲಾ? ಅದರ ಸಂಗತಿ ತಿಳಿಯಬೇಕು" ಎಂದು ಬಿಲ್ಲಿಗೆ ಬಾಣ ಹೂಡಿ, ಅಂಗರಕ್ಷಕನ ಮೇಲೆ ಗುರಿ ಹಿಡಿದು, "ನೀನೇನೋ ಅವನನ್ನು ಮಹಾರಾಜಾ ಅನ್ನುತ್ತೀ. ಅದು ನಿಜವೇನಾ ಅಲ್ಲ ಸುಳ್ಳಾ? ಅವನು ನಿಜಕ್ಕೂ ಮಹಾರಾಜನೇನಾ?" ಎಂದು ಕೇಳಿದನು.

"ಹೌದೋ! ನಾನೇ ಮಹಾರಾಜ! ನೀನು ಕೇಳಿದ್ದು ಕೊಡುತ್ತೇನೆ. ಕೊಲ್ಲು, ಕೊಲ್ಲು ಚಿರತೇನ" ಎಂದು ಕೂಗಿದ ದುರ್ಮುಖರಾಜ.

ಚಿರತೆಯನ್ನೇ ಗಮನಿಸುತ್ತಿದ್ದ ಅಂಗರಕ್ಷಕನು, ರಾಜನಿಗೆ ಹಿಂದೆ ಓಡಲಾಗದಂತೆ ಮುಳ್ಳುಪೊದರುಗಳಿರುವುದನ್ನೂ, ಚಿರತೆ ರಾಜನ ಮೇಲೆ ಹಾರಲಿರುವುದನ್ನೂ ನೋಡಿ, ತನ್ನ ಕತ್ತಿಯನ್ನು ಹಿರಿದು, "ಮಹಾರಾಜರೆ, ನೀವೂ ನಿಮ್ಮ ಒರೆಯಿಂದ ಕತ್ತಿ ತೆಗೆದುಕೊಳ್ಳಿ. ಗಾಯಗೊಂಡ ಚಿರತೆಯನ್ನು ನಾವಿಬ್ಬರೂ ಹೊಡೆದು ಕೊಂದುಬಿಡಬಹುದು. ಅವನೇನೋ ವಿನಾನಮೇಷ ನೋಡುತ್ತಿದ್ದಾನೆ" ಎನ್ನುತ್ತ ಒಂದಡಿ ಮುಂದಿಟ್ಟನು.

ಆಗ ಆಟವಿಕನು ಅಂಗರಕ್ಷಕನ ಮುಂದೆ ನೆಲದಲ್ಲಿ ಚುಚ್ಚಿಕೊಳ್ಳುವ ಹಾಗೆ ಒಂದು ಬಾಣವನ್ನು ಹೊಡೆದು, ಇನ್ನೊಂದು ಬಾಣವನ್ನು ತೆಗೆದು ಬಿಲ್ಲಿಗೆ ಹೂಡಿ, "ನಾನು ಹೇಳಿದ ಮಾತಿಗೆ ಉತ್ತರ ಕೊಡುವೆಯಾ, ನನ್ನ ಬಾಣದಿಂದ ನಿನ್ನ ಪ್ರಾಣ ತೆಗೆಯಲೇ? ಚಿರತೆಯಂತೂ ಸಾಯುವ ಮೊದಲು ನಿನ್ನ ರಾಜನ ಕುತ್ತಿಗೆ ಕಡಿದು ಯಾವ ನದಿಬದಿಗಾದರೂ ಹೋಗಿ ಗಾಯದ ನೋವಿನಿಂದ ಪ್ರಾಣ ಬಿಡುವುದಂತೂ ಖಂಡಿತ" ಎಂದನು. ದುರ್ಮುಖರಾಜನು ತನ್ನ ಕತ್ತಿಯನ್ನು ಸೆಳೆದು ಚಿರತೆಯನ್ನು

ಕೊಲ್ಲಲು ಎರಡಡಿ ಮುಂದೆ ಇಟ್ಟು, ಹೆದರಿ, ಎರಡಡಿ ಹಿಂದಿಟ್ಟು, "ಎಲೋ, ಆಟವಿಕಾ, ನಾನು ಉದಯಗಿರಿ ರಾಜನಾದ ದುರ್ಮುಖನು. ವಿಧಿಯ ಆಟದಿಂದ ಹೀಗೆ ಕಾಡಿನಲ್ಲಿ ಸಿಕ್ಕಿಕೊಳ್ಳ ಬೇಕಾಯಿತು. ನೀನು ಬಿಟ್ಟ ಬಾಣ ಇದರ ಮರ್ಮಕ್ಕೆ ತಾಗಿಲ್ಲ. ಇನ್ನೊಂದು ಬಾಣದಿಂದ ಇದನ್ನು ಕೊಂದುಬಿಡು. ಇಲ್ಲದಿದ್ದರೆ ನನ್ನನ್ನು ಕೊಂದೇ ಅದು ಸಾಯುವ ಹಾಗಿದೆ. ಹುಂ, ಬೇಗ" ಎಂದನು.

"ಮೊದಲೇ ಹೇಳಬಹುದಿತ್ತಲ್ಲ, ಇದು ಯಾವಾಗೋ ಸಾಯುತಿತ್ತು. ರಾಜರಾಗಿ ಸೈನ್ಯ ಗೈನ್ಯ ಏನೂ ಇಲ್ಲದೆ ಹೀಗೆ ಕಾಡಿನಲ್ಲಿ ಬರುವುದುಂಟೇ ಮಹಾರಾಜರೇ?" ಎಂದು ಆಟವಿಕನು ಬಾಣದ ಗುರಿಯನ್ನು ಅಂಗರಕ್ಷಕನಿಂದ ಬಾದಲಾಯಿಸಿ ಚಿರತೆಯ ಕಡೆಗೆ ತಿರುಗಿಸಿದನು.

ಅದೇ ವೇಳೆಯಲ್ಲಿ ಚಿರತೆ ಗರ್ಜಿಸಿ ಕೊನೆಯ ರಭಸದಿಂದ ರಾಜನ ಮೇಲೆಯೇ ಲಂಘಿಸಿತು. ಆದುದರಿಂದ ಆಟವಿಕನು ಬಿಟ್ಟ ಬಾಣವು ಗುರಿ ತಪ್ಪಿ ಮುಂದಿದ್ದ ಮರದ ಕಾಂಡಕ್ಕೆ ಚುಚ್ಚಿಕೊಂಡಿತು.

ದುರ್ಮುಖರಾಜನು ಚಿರತೆಯ ನೇರ್‌ನೆಗೆತವನ್ನು ತಪ್ಪಿಸಿಕೊಳ್ಳಲು ಅಡ್ಡವಾಗಿ ಹಾರಿ ಪೊದರಿನಾಚೆಗೆ ಬಿದ್ದು, ಆ ಕ್ಷಣದಲ್ಲೇ ಚೆಂಡಿನಂತೆ ಬಿದ್ದಲ್ಲಿಂದೆದ್ದು ಕಾಲುಗಳು ಬೆನ್ನಿಗೆ ತಾಗುವಷ್ಟು ವೇಗದಲ್ಲಿ ಓಡಿದನು. ಚಿರತೆಯೂ ಅಷ್ಟಕ್ಕೆ ಬಿಡಲಿಲ್ಲ, ಅವನನ್ನು ಓಡಿಸಿ ಕೊಂಡು ಓಡಿತು.

ಹಾಗೆ ಅವರು ಮರಗಳ ಗುಂಪಿನಲ್ಲಿ ಅಡ್ಡಾದಿಡ್ಡಿ ಯಾಗಿ ಸ್ವಲ್ಪ ದೂರ ಓಡುತ್ತಿರಲು, ಆ ಕಡೆಗೇ ಬರುತ್ತಿದ್ದ ಉಗ್ರದಂಡ ರಾಕ್ಷಸನು ಥಕ್ಕನೆ ಒಂದು ಕೈಯಲ್ಲಿ ರಾಜನನ್ನು ಹಿಡಿದು ನಿಲ್ಲಿಸಿ, "ಈ ಸಣ್ಣ ಚಿರತೆಯನ್ನು ನೋಡಿ ಪುಕ್ಕಲು ಹಿಡಿದು ಓಡುವು ದೆಂದರೇನಿದು? ಎಂಥ ನರಸತ್ತ ನರರಾಜ ನೀನು? ಥೂ!" ಎಂದನು.



ದುರ್ಮುಖರಾಜನು ಬಿರುಗಾಳಿಗೆ ಸಿಕ್ಕಿದ ಒಣ ತರಗೆಲೆಯಂತೆ ನಡುಗುತ್ತ, ಏನೋ ಹೇಳಲು ಬಾಯಿ ತೆರೆದನೇ ಹೊರತು ಶಬ್ದವೇ ಹೊರಡಲಿಲ್ಲ. ಅಷ್ಟರಲ್ಲಿ ಚಿರತೆಯೂ ಅಲ್ಲಿಗೇ ಬಂದಿತು. ಆ ಚಿರತೆ ಯನ್ನು ಉಗ್ರದಂಡನು ಕಾಲಿನಿಂದೊದ್ದು ಮೇಲೆ ಹಾರಿಸಿ, ಕೆಳಗೆ ಬೀಳುವಾಗ ಅದರ ಕುತ್ತಿಗೆಯನ್ನು ಹಿಡಿದುಕೊಂಡು, "ಎಲೋ ಮಾನವ ರಾಜಾ! ದೇಶವನ್ನೇ ಪಾಲಿಸುವ ನಿನಗಿಂತಲೂ, ಕಾಡಿನ ಈ ಕ್ಷುದ್ರ ಪ್ರಾಣಿಯೇ ತುಂಬಾ ಧೈರ್ಯಶಾಲಿ ಯಾಗಿದೆ; ನೋಡಿದೆಯಾ? ಚುಚ್ಚಿಕೊಂಡ ಬಾಣ ದೊಂದಿಗೇ ಓಡಿ ಬರುತ್ತಿದೆ!" ಎಂದನು.

ದುರ್ಮುಖರಾಜನು ರಾಕ್ಷಸನ ಹಿಡಿತದಿಂದ ಪಾರಾಗಲು ಒದರಿಕೊಂಡು ಅವನ ಮಾತಿಗೆ ತಲೆ ಯಾಡಿಸುತ್ತ "ಹೌದು ಹೌದು, ನಾನು ಒಬ್ಬ ರಾಜನೇ. ಆದು ನೀನು ಹೇಳಿದಂತೆ ಒಂದು ಕ್ಷುದ್ರ ಪ್ರಾಣಿಯೇ. ಕಾಡುಪ್ರಾಣಿ. ಕ್ರೂರಪ್ರಾಣಿ! ಹೌದು



ಹೌದು" ಎಂದು ಬಡಬಡಿಸಿದನು. ಅಷ್ಟರಲ್ಲೇ ಅಲ್ಲಿಗೆ ಕಳ್ಳರ ನಾಯಕ ನಾಗಮಲ್ಲನೂ, ಅವನ ಇಬ್ಬರು ಅನುಚರರೂ ಅವರ ಹಿಂದೆ ಕಟುಕಕರಡಿ ಮನುಷ್ಯನೂ ಬಂದರು.

ನಾಗಮಲ್ಲನು ದುರ್ಮುಖಿರಾಜನನ್ನು ನೋಡಿ. ಭಯದಿಂದ ಕೈಮುಗಿದು, "ಪ್ರಭುಗಳೇ, ಈಗ ತಮ್ಮ ಬಾಯಿಯಿಂದಲೇ ತಾವು ಯಾರೋ ದುರ್ಜಯ ಶೆಟ್ಟಿ ಅಲ್ಲವೆಂದೂ ದುರ್ಮುಖಿ ಮಹಾರಾಜರೆಂದೂ ಹೇಳಿದಿರಿ. ಇನ್ನು ತಮ್ಮನ್ನು ಸುರಕ್ಷಿತವಾಗಿ ರಾಜಧಾನಿಗೆ ಸೇರಿಸಿಬಿಡುವುದು ನಮ್ಮ ಕರ್ತವ್ಯ. ನಾವು ಕಳ್ಳರಾದರೂ ನಮ್ಮ ರಾಜರನ್ನೇ ದೋಚುವವರಲ್ಲ. ನಾವು ತುಂಬಾ ರಾಜಭಕ್ತಿಯುಳ್ಳವರು ಪ್ರಭುಗಳೇ. ಆ ಮೇಲೆ ತಮಗೆ ತೋರಿದ ಬಹುಮಾನವನ್ನು ಕೊಡುವಿರಂತೆ" ಎಂದನು.

ನಾಗಮಲ್ಲನ ಮಾತು ಕೇಳಿ ಕಟುಕಕರಡಿ ಅತ್ಯಾಕ್ರೋಶದಿಂದ, "ಹೇ! ಕಾಲಭೈರವಾ!" ಎಂದು ಕರ್ಕಶವಾಗಿ ಕೂಗಿ, ತನ್ನ ಚಪಗೊಡಲಿಯನ್ನು ಮೇಲೆತ್ತಿ "ಎಲವೋ! ಈ ದುರ್ಮುಖಿ ರಾಜನ ತಲೆಗಾಗಿಯೇ ಕರಡಿಕೆಂಗಣ್ಣ ಮಹಾಮಾಂತ್ರಿಕರು ಕಾದುಕೊಂಡಿರುವಾಗ. ಇವನನ್ನು ಸುರಕ್ಷಿತವಾಗಿ ಕರೆದೊಯ್ಯುವವನೋ ನೀನು? ಮೊದಲು ಅವನ ತಲೆ ಕಡಿದುಕೊಳ್ಳುತ್ತೇನೆ. ರಾಜಧಾನಿಗೆ ಅವನ ಮುಂಡವನ್ನು ತೆಗೆದುಕೊಂಡು ಹೋಗಿ ಬೇಕಾದರೆ. ಆಗ ಅಲ್ಲಿ ಈ ರಾಜನ ಉತ್ತರಾಧಿಕಾರಿಗಳಿಂದ ನಿನಗೆ ಸಿಕ್ಕುವ ಬಹುಮಾನವೇನು ಗೊತ್ತೋ? ಶಿರಚ್ಛೇದನ! ಈ ಬುದ್ಧಿಗೇಡಿ ಆಲೋಚನೆ ಬಿಡು" ಎಂದನು.

"ಆಹಾಹಾ! ಬಹಳ ಬುದ್ಧಿವಂತಿಕೆಯ ಮಾತು ಹೇಳಿದೆ ಕಟುಕಭಲ್ಲೂಕಾ!" ಎಂದು ಉಗ್ರದಂಡ ರಾಕ್ಷಸನು, ತನ್ನ ಮುಷ್ಟಿಯಲ್ಲಿ ಸಿಕ್ಕಿ ಒದರಾಡಿಕೊಂಡಿರುವ ಚಿರತೆಯನ್ನು ಬೀಸಿ ದೂರ ಬಿಸುಟು, ಸುತ್ತಲೂ ಇರುವವರನ್ನು ಒಂದುಸಾರಿ ನೋಡಿ, "ಈಗ ಇಲ್ಲಿ ಅಸಹಾಯಕನಾಗಿರುವ ಈ ದುರ್ಮುಖಿ ರಾಜನ ತಲೆಯನ್ನು ಈ ಕಟುಕಭಲ್ಲೂಕ ಮನುಷ್ಯನು ಕಡಿಯುವುದು ಧರ್ಮವೆಂದು ನನಗೆ ತೋರುವುದಿಲ್ಲ. ಅದೂ ಅವನಾಗಿ ರಾಜನನ್ನು ಹಿಡಿಯಲಿಲ್ಲ. ನಾವು ಹಿಡಿದುಕೊಟ್ಟು ಕಡಿಸುತ್ತೇವೆ! ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದನು.

ಕಟುಕಕರಡಿಯವನ ಹೊರತು ಉಳಿದೆಲ್ಲರೂ, ರಾಜನ ತಲೆ ಕಡಿಯುವುದು ಅನ್ಯಾಯವೆಂದೂ, ಅಧರ್ಮವೆಂದೂ ಅಭಿಪ್ರಾಯ ಹೇಳಿದರು. ಅದನ್ನು ಕೇಳಿ ಕಟುಕಕರಡಿಯವನ ಕೈಯಿಂದ ಚಪಗೊಡಲಿ ಕೆಳಕ್ಕೆ ಜಾರಿಬಿತ್ತು.

"ಹಾಗಾದರೆ ನಾನೇನು ಮಾಡಲಿ? ಮಹಾಶಕ್ತಿಸಂಪನ್ನರಾದ ಕರಡಿಕೆಂಗಣ್ಣ ಮಾಂತ್ರಿಕರು ತಮ್ಮ ಮಂತ್ರಶಕ್ತಿಯಿಂದ ಕೇವಲ ಮನುಷ್ಯನಾದ ನನ್ನನ್ನು ಹೀಗೆ ಮಹಾಭಲ್ಲೂಕವನ್ನಾಗಿ ಬದಲಾಯಿಸಿ ಕಳುಹಿ

ಸಿದ್ದು, ಈ ರಾಜನ ತಲೆಯನ್ನು ತರಬೇಕೆಂದು ತಾನೇ? ಅವರ ಮಾತು ಮೀರಿದರೆ ಅವರು ನನ್ನನ್ನು ಸುಮ್ಮನೆ ಬಿಡುವರೇ? ಸಾಯುವವರೆಗೂ ಹೀಗೇ ಕರಡಿಯಾಗಿಯೇ ಇರು ಅಂದರೇನು ಗತಿ? ಅವರು ನನ್ನನ್ನು ಫೂ ಅಂತ ಊದಿ ಭಸ್ಮ ಮಾಡಿದರೂ ಮಾಡಿದರೇ!" ಎಂದನು ಭಯದಿಂದ.

"ಅದೂ ನಿಜವೇ. ಬೇರೆ ದಾರಿ ಏನಾದರೂ ಇದೆಯೇ ಹೇಳಿರಿ" ಎಂದ ಉಗ್ರದಂಡ, ಆಗ ಅಂಗರಕ್ಷಕನು ಒಂದಡಿ ಮುಂದಿಟ್ಟು ಹೆದರುತ್ತಲೇ ಉಗ್ರದಂಡನಿಗೆ ಪ್ರಣಾಮಮಾಡಿ, "ಕಾಲಿಗೆ ಬಿದ್ದೇ ನನ್ನ ಅಭಿಪ್ರಾಯ ಹೇಳುತ್ತೇನೆ ರಾಕ್ಷಸಪ್ರಭೋ! ಮಹಾರಾಜರನ್ನು ಜೀವದೊಂದಿಗೇನೇ ಆ ಮಹಾ ಮಾಂತ್ರಿಕರ ಬಳಿಗೆ ಕರೆದೊಯ್ಯುವುದು ಚೆನ್ನಾಗಿದ್ದೀತು. ಇವರ ತಲೆಯ ಸಮಾಚಾರವನ್ನು ಅವರೇ ನೋಡಿಕೊಳ್ಳುತ್ತಾರಲ್ಲ. ಅವರು ತಲೆ ತರಲಿಕ್ಕೆ ಹೇಳಿದ್ದು, ಜೀವದೊಂದಿಗೆ ಹಿಡಿದು ತರಲು ಸಾಧ್ಯವಾಗದಿದ್ದರೆ ಮಾತ್ರವೇ ಅಂತ ನಾವು ಅರ್ಥಮಾಡಿಕೊಳ್ಳುವುದು ಈ ಸಂದರ್ಭದಲ್ಲಿ ನ್ಯಾಯವೆಂದು ನನ್ನ ಅಲ್ಪಬುದ್ಧಿಗೆ ತೋರುತ್ತದೆ. ಇನ್ನು ತಮ್ಮ ಚಿತ್ತ!" ಎಂದನು.

"ಈ ಆಲೋಚನೆ ಸರಿಯೆಂದೇ ಕಾಣುತ್ತದೆ. ಎಲೋ ಕಟುಕಕರಡೀ ನರನೇ! ನೀನೂ ಕೇಳಿದಿಯಷ್ಟೇ? ಇದಕ್ಕೇನು ಹೇಳುವಿ?" ಎಂದು ಕೇಳಿದ ಉಗ್ರದಂಡ.

"ಈ ರಾಜನು ಮಹಾತಂತ್ರಶಾಲಿಯಾಗಿದ್ದಾನೆ. ಇವನನ್ನು ಈ ಮಹಾರಣ್ಯವನ್ನು ದಾಟಿಸಿ ಮಹಾ ಮಾಂತ್ರಿಕರ ಬಳಿಗೆ ಕೊಂಡೊಯ್ಯುವುದೇನೂ ಸುಲಭವಲ್ಲ. ಯಾವ ಕ್ಷಣಕ್ಕಾದರೂ ಕಪ್ಪೆಯಹಾಗೆ ಜಾರಿ ಹೋಗಬಹುದು. ಈಗ ಇವನು ಸಿಕ್ಕಿಬಿದ್ದದ್ದೇ ಆ ಚಿರತೆಯ ಪುಣ್ಯದಿಂದ. ಇನ್ನೊಮ್ಮೆ ಇವನು ತಪ್ಪಿಸಿಕೊಂಡರೆ ಮತ್ತೆಂದೂ ಸಿಗಲಾರನು. ಆದ್ದರಿಂದ



ನ್ಯಾಯ - ಅನ್ಯಾಯ ದಯಾ - ದಾಕ್ಷಿಣ್ಯ ನೋಡಿಕೊಂಡಿದ್ದರೆ ಸಾಗದು." ಎಂದು ಕಟುಕಕರಡಿಯವನು ದುರ್ಮುಖನ ಕಡೆಗೆ ಒಂದಡಿ ತೆಗೆದಿಟ್ಟನು.

ದುರ್ಮುಖನು "ಅಯ್ಯೋ!" ಎಂದು ಕೂಗಿ, ಉಗ್ರದಂಡನ ಹಿಂದೆ ಹೋಗಿ, "ಉಗ್ರದಂಡ ಮಹಾ ಪ್ರಭುಗಳೇ! ಶರಣು! ಶರಣು! ಈ ಯಮದೂತನ ಕೈಯಿಂದ ನೀವೇ ನನ್ನನ್ನು ಕಾಪಾಡಬೇಕು." ಎಂದು ಮೊರೆಯಿಟ್ಟನು.

"ಅಭಯ ಕೊಟ್ಟಿದ್ದೇನೆ! ಹೆದರಬೇಡ!" ಎಂದು ಉಗ್ರದಂಡ ರಾಕ್ಷಸನು ರಾಜನ ಬೆನ್ನು ತಡವಿ, "ಎಲೋ, ಭಲ್ಲೂಕ ಮನುಷ್ಯ! ಈ ರಾಜನನ್ನು ನಿನ್ನ ಹಿಂದೆ ಮಾಂತ್ರಿಕನ ಬಳಿಗೆ ಕರೆದು ತರುವ ಬಾಧ್ಯತೆ ನನ್ನದು. ನೀನು ನಿನ್ನ ವಾಹನವಾದ ಮೊಂಡು ಸೊಂಡಿಲಿನ ಆನೆಯಮೇಲೆ ಏರಿಕೊಂಡು ಮುಂದೆ ನಡೆ. ಈ ರಾಜನನ್ನು ಕರೆದುಕೊಂಡು ನಾನು ನಿನ್ನ ಹಿಂದೆ ಬರುತ್ತೇನೆ. ನಂಬುಗೆಯಾಯಿ



ತಪ್ಪೇ? ಇನ್ನು ಸುಮ್ಮನೆ ಮುಂದೆ ನಡೆ." ಎಂದನು. "ಹೇಳಿದ ಮಾತು ತಪ್ಪದಿದ್ದರೆ ಸರಿ. ಇದೋ, ಈಗಲೇ ಹೋಗಿ, ನನ್ನ ವಾಹನದ ಕಾಲುಗಳ ಹಗ್ಗವನ್ನು ಬಿಚ್ಚಿ ನಿಲ್ಲಿಸಿಬರುತ್ತೇನೆ" ಎಂದು ಕಟುಕಕರಡಿಯುವನು ಆನೆಯು ಬಳಿಗೆ ಹೊರಟು ಹೋದನು.

ಇದೆಲ್ಲಾ ನೋಡುತ್ತ ನಿಂತಿದ್ದ ಆಟವಿಕ ಮನುಷ್ಯ ಬಿಲ್ಲಿಗೆ ಬಾಣ ಅನಿಸಿಕೊಂಡು ಗಬಗಬನೆ ನಡೆಯುತ್ತ, "ಒಹೋಯ್! ಕಟುಕಕರಡಿಯಣ್ಣ! ಅವಸರಪಟ್ಟು ಅಜಾಗರೂಕತೆಯಿಂದ ಆ ಆನೇ ಹತ್ತಿರ ಹೋಗಿ ಬಿಡಬೇಡಕಣೋ! ನಿಮ್ಮ ಮಾತಿನ ಗದ್ದಲದಲ್ಲಿ, ಆನೆಯ ಹತ್ತಿರ ಒಂದು ಸಿಂಹದ ಗರ್ಜನೆಯೂ, ಆನೆ ಘೀಂಕರಿಸುವ ಶಬ್ಧವೂ ನಿಮಗೆ ಕೇಳಿಸಿರಲಿಕ್ಕಿಲ್ಲ. ಇಷ್ಟು ಹೊತ್ತಿಗೆ ಆನೆಯ ಕುಂಭಸ್ಥಳವನ್ನು ಸಿಂಹವು ಹರಿದು 'ಮುಕ್ಕುತ್ತಿದ್ದರೂ ಇರಬಹುದು" ಎಂದು ಎಚ್ಚರಿಕೆ ಕೊಟ್ಟನು.

"ನಿಜವೇನು?" ಎಂದು ಕಟುಕಕರಡಿಯುವನು ಬೆದರಿಬಿದ್ದು ಓಡೋಡುತ್ತ ಬಿದ್ದಿರುವ ಆನೆಯನ್ನು ಸಮೀಪಿಸಿದನು.

ಆಟವಿಕನು ಹೇಳಿದಂತೆಯೇ, ಕಾಲುಗಳು ಬಂಧಿಸಲ್ಪಟ್ಟು ಬಿದ್ದಿರುವ ಆನೆಯಮೇಲೆ ಬೀಳಲು ಸಿಂಹವೊಂದು ಅದರಸುತ್ತಲೂ ಪ್ರದಕ್ಷಿಣೆ ಬರುತ್ತ, ನಡುನಡುವೆ ಎಡೆ ನೋಡಿ ಆನೆಯ ತಲೆಯನ್ನು ಪಂಜಾದಿಂದ ಹೊಡೆಯುತ್ತ ಅದರ ತಲೆಯನ್ನು ಸೀಳಲು ಪ್ರಯತ್ನಿಸುತ್ತಿತ್ತು. ಆನೆ ಘೀಂಕರಿಸುತ್ತ, ಮೊಂಡು ಸೊಂಡಿಲನ್ನು ಸಿಂಹದ ಕಡೆಗೆ ಚಾಚಿ ಚಾಚಿ ಅದನ್ನು ಹಿಡಿಯಲು ಪ್ರಯತ್ನಿಸುತ್ತ, ಕಾಲು ಕಟ್ಟುಗಳನ್ನು ಬಿಚ್ಚಲು ಒದರಾಡುತ್ತ, ಹೊರಳುತ್ತ ನಾನಾಯಾತನೆ ಪಡುತ್ತಿದ್ದಿತು.

ಕಟುಕಕರಡಿಯುವನು ಅದನ್ನು ನೋಡುತ್ತಲೇ, ಕಾಡು ನಡುಗುವಂತೆ "ಭೈರವ" ನಾಮ ಗರ್ಜನೆ ಮಾಡಿ, "ನನ್ನಂಥವನ ವಾಹನವನ್ನೇ ಹೊಟ್ಟೇಗೆ ಹಾಕಿಕೊಳ್ಳಲು ನೋಡುವೆಯಾ? ನೋಡು ನನ್ನ ಪೆಟ್ಟಿನ ರುಚಿ!" ಎನ್ನುತ್ತ ಚಪಗೊಡಲಿಯನ್ನೆತ್ತಿ ಸಿಂಹದ ಮೇಲೆ ನೆಗೆದನು.

ಸಿಂಹವು ಮನುಷ್ಯನಂತೆ ಆಯುಧಧಾರಿಯಾದ ಈ ವಿಚಿತ್ರ ಕರಡಿಯನ್ನು ನೋಡಿ, ಹೆದರಿ ನಾಲ್ಕಡಿ ಹಿಂದೆ ಹೋಯಿತು. ಕಟುಕಕರಡಿ ನಿಜಕ್ಕೂ ತನ್ನ ಮೇಲೆ ಧುಮುಕುವಾಗ, ಆ ಮೃಗರಾಜವೂ ಕೋಪಾವೇಶದಿಂದ ಗರ್ಜಿಸಿ ಪಂಜಾ ಅಗಲಿಸಿ ಅವನ ಮೇಲೆಯೇ ಹಾರಿತು.

ಆಗ ಅವನ ಚಪಗೊಡಲಿಯ ಏಟು ಗುರಿ ತಪ್ಪಿ ಅದರ ಹಿಂದಿನ ಒಂದು ಕಾಲಿಗೆ ತಾಗಿತ್ತು. ಕೂಡಲೇ ಸಿಂಹವು ಕೆಳಗೆಬಿದ್ದು ಪುನಃ ಎದ್ದು ಮತ್ತೊಂದುಸಾರಿ ಅವನ ಮೇಲೆ ಹಾರಲಿರುವ ಸಮಯದಲ್ಲೇ ಆಟವಿಕನು ಪ್ರಯೋಗಿಸಿದ ಬಾಣ ಸರಿಯಾಗಿ ಅದರ ಗುಂಡಿಗೆಗೆ ತಾಗಿ, ಬದಿಗೆ

ಮುದುಡಿಬಿತ್ತು ಆ ಸಿಂಹ. ಅಷ್ಟಾದರೂ ಮತ್ತೆ ಎದ್ದು ನಿಲ್ಲುವ ಪ್ರಯತ್ನದಲ್ಲಿ ಅದಕ್ಕೆ ಕುತ್ತಿಗೆ ಎತ್ತಲಾಗಲಿಲ್ಲ. ಅದು ಹಾಗೇ ಹೊರಳಾಡಿ ಕೊಳ್ಳುತ್ತಿರಲು, ಅದನ್ನು ಹೊಡೆಯಲು ಹೋಗುತ್ತಿರುವ ಕಟುಕ ಕರಡಿಯುವನನ್ನು ಆಟವಿಕನು ತಡೆದು, "ಏನು ಸಾಹಸ ನಿನ್ನದು ಭಲ್ಲೂಕಣ್ಣಾ! ಇನ್ನು ಈ ಸಿಂಹ ಸತ್ತ ಹಾಗೇ ಲೆಕ್ಕ. ಇನ್ನೊಮ್ಮೆ ನಿನ್ನ ಕೊಡಲಿ ಹಾಕಿ ಹರಿದು ಅದರ ಚರ್ಮ ಹಾಳು ಮಾಡಬೇಡ. ಅದರ ಜೂಲೂ, ಚರ್ಮವೂ ನನಗೆ ಬೇಕು. ಸುಮ್ಮನಿರು. ಅದು ಮೆಲ್ಲವೇ ಸಾಯಲಿ." ಎಂದನು.

ಕಟುಕಕರಡಿಯುವನು ಉದ್ದುದ್ದ ಉಸಿರು ಬಿಡುತ್ತ ಆಟವಿಕನನ್ನು ನೋಡಿ, "ಸರಿಸರಿ. ಅಡವಿಯಲ್ಲೇ ಇರುವ ನಿನಗೆ ಅದೆಲ್ಲಾ ಗೊತ್ತಿರುತ್ತೆ. ನಿನ್ನ ಬಾಣದ ಗುರಿಯನ್ನು ತುಂಬಾ ಮೆಚ್ಚುತ್ತೇನೆ. ಅಲ್ಲವೋ ಅಪ್ಪ, ನೀನು ಒಂಟಿ ಮನುಷ್ಯನಾಗಿದ್ದರೆ, ಈ ಕಾಡನ್ನು ಬಿಟ್ಟು ನನ್ನೊಂದಿಗೆ ಬಂದುಬಿಡಬಹುದಲ್ಲ? ಅಲ್ಲಿ ಮಹಾರಾಜರೊಂದಿಗೆ ಹೇಳಿ, ನನ್ನ ಕೈ ಕೆಳಗೆ ಉಪಕಟುಕನ ನೌಕರಿ ಕೊಡಿಸುತ್ತೇನೆ. ಆಗದೆ?' ಎಂದನು.

ಆಟವಿಕನು ತಲೆ ಬಗ್ಗಿಸಿ, "ಅದನ್ನೂ ನೋಡಬಹುದು. ಸರಿ, ನಿನ್ನೊಂದಿಗೆ ನಗರಕ್ಕೆ ಬರುತ್ತೇನೆ. ನಿನ್ನ ಪ್ರತಾಪವೂ ನನಗೆ ಮೆಚ್ಚಿಗೆಯಾಗಿದೆ. ಕಲಸ ಮಾಡಿದರೆ ನಿನ್ನಂಥ ಮಹಾ ಸಾಹಸಿಯ ಹತ್ತಿರವೇ ಕೆಲಸ ಮಾಡಬೇಕು." ಎಂದನು.

"ಜೈ ಕಾಲಭೈರವಾ!" ಎಂದು ಕಟುಕ ಕರಡಿಯುವನು ತಲೆ ಅಲುಗಿಸಿದನು. ಆಗ ಉಗ್ರದಂಡ ರಾಕ್ಷಸನು ಉಳಿದವರೊಂದಿಗೆ ಅಲ್ಲಿಗೇ ಬಂದು, "ಓಹ್! ಇಲ್ಲಿ ಬಹಳ ಕೆಲಸ ನಡೆದು ಹೋಯಿತಲ್ಲ! ಈ ಕಟುಕ ಭಲ್ಲೂಕ ಮನುಷ್ಯನಿಗೆ ತಕ್ಕ ಸೇವಕನೇ ದೊರಕಿದನೆಂದು ಕಾಣುತ್ತೆ! ಇಬ್ಬರೊಳಗೆ ತುಂಬ



ಅನ್ಯೋನ್ಯತೆ ಕೂಡಿದ ಹಾಗಿದೆ? ನಿಜತಾನೆ? ಭಲೇ! ಭಲೇ!" ಎಂದು ನಕ್ಕನು.

ಅವನ ಮಾತಿನಿಂದ ಉಬ್ಬಿದ ಕಟುಕ ಕರಡಿಯುವನು, ತನ್ನ ಕೊಡಲಿಯನ್ನು ಕುಣಿಸುತ್ತ "ಎಲೋ, ಕಾಡು ಕಳ್ಳ ನಾಗಮಲ್ಲ! ನೀನೂ ನಿನ್ನ ಸ್ನೇಹಿತರೂ ಕೂಡಿ, ನನ್ನ ವಾಹನವಾದ ಆನೆಯ ಕಾಲಿನ ಕಟ್ಟುಗಳನ್ನು ಬಿಚ್ಚಿರಿ. ಕೇಳುವಿರಷ್ಟೇ ನನ್ನ ಮಾತು?" ಎಂದನು.

"ಆಗಲಿ, ಭಲ್ಲೂಕ ದೊರೇ! ಹಾಗೇ ಆಗಲಿ. ಕಟ್ಟು ಬಿಚ್ಚಿದ ಕೂಡಲೇ ಅದು ಎದ್ದು ನಮ್ಮನ್ನು ಎಳೆದು ಹಾಕಿ ತುಳಿದು ಸಾಯಿಸದಂತೆ ಮಾಡುವ ಭಾರ ನಿಮ್ಮದು. ನಂಬುತ್ತೇವೆ" ಎಂದ ನಾಗಮಲ್ಲ. "ಅದು ನಾನು ಹೇಳುವ ಹಾಗೆ ಕೇಳುವ ನನ್ನ ಸೇವಕ ಪ್ರಾಣಿ. ನನ್ನ ಅನುಮತಿ ಇಲ್ಲದೆ ಯಾರಿಗೂ ಏನೂ ಮಾಡದು. ಧೈರ್ಯದಿಂದ ಬಿಚ್ಚಿಬಿಡಿ!" ಎಂದನು ಕರಡಿ ಮನುಷ್ಯ.

ನಾಗಮಲ್ಲ ಮೊದಲಾದವರು ಆನೆಯ ಕಾಲಿನ ಕಟ್ಟುಗಳನ್ನು ಬಿಚ್ಚುವಾಗ, ಆ ಹಗ್ಗವನ್ನೇ ಅದರ ಕೊರಳಿಗೆ ಉರುಳಿನಂತೆ ಕಟ್ಟಿ ಕರಡಿಯವನು ಅದರ ಬೆನ್ನಿನ ಮೇಲೆ ಹತ್ತಿ ಕುಳಿತುಕೊಂಡನು.

ಮೊಂಡು ಸೊಂಡಿಲಿನ ಆನೆ, ತನ್ನ ಕಾಲಿನ ಬಂಧನಗಳೆಲ್ಲ ತೊಲಗುತ್ತಲೇ ಘೀಂಕರಿಸಿಕೊಂಡು ಎದ್ದು ನಿಂತುಕೊಂಡಿತು.

ಕಟುಕ ಕರಡಿಯವನು ಆಟವಿಕನನ್ನು ಕೈ ಸನ್ನೆ ಮಾಡಿ ಕರೆದು, "ಬಾ, ಬಾ, ನೀನು ಈ ಅರಣ್ಯ ಮಾರ್ಗವನ್ನು ಚೆನ್ನಾಗಿ ಬಲ್ಲವನು ತಾನೆ? ಬಂದು ನನ್ನ ವಾಹನದ ಕುಂಭ ಸ್ಥಳದ ಮೇಲೆ ಕುಳಿತುಕೊಂಡು, ಚಂದ್ರಶಿಲಾ ನಗರಕ್ಕೆ ಸಮೀಪದ ದಾರಿ ತೋರಿಸು." ಎಂದನು.

ಆದೇ ಬಾಯಿಯಿಂದ ಉಗ್ರದಂಡ ರಾಕ್ಷಸನನ್ನೂ ನೋಡಿ, "ಹೇಳಿದ ಮಾತು ನೆನಪಿದೆಯಪ್ಪೇ ಉಗ್ರದಂಡಾ? ಆ ಕಳ್ಳ ದುರ್ಮುಖ ರಾಜನು ಓಡಿಗೀಡಿ ಹೋಗದಂತೆ ನನ್ನ ಹಿಂದೆ ಕರೆದುಕೊಂಡು ಬರುವ ಬಾಧ್ಯತೆ ನಿನ್ನದು. ಅವನು ಮಹಾ ಪಾತಾಳತಂತ್ರ ರಾಜ. ಜಾಗ್ರತೆ!" ಎಂದನು.

ಉಗ್ರದಂಡನು ತಲೆ ದೂಗುತ್ತ, "ಬರುತ್ತೇನೆ. ನನಗೂ ಕರಡಿ ಕೆಂಗಣ್ಣ ಮಾಂತ್ರಿಕರ ಹತ್ತಿರ ಕೆಲಸವಿದೆ. ನೀನು ಆನೆಯ ಮೇಲೆ ಮುಂದೆ ಸಾಗು. ಇಲ್ಲಿರುವವರೆಲ್ಲರೂ ನಿನ್ನ ಹಿಂದೆಯೇ ಮುಂದೆ ಬರುತ್ತೇವೆ. ಇಷ್ಟವಿಲ್ಲದವರು ಅರಣ್ಯವು ದಾಟಿದ ಕೂಡಲೇ ಅವರವರ ದಾರಿ ಹಿಡಿದು ಹೊರಟು ಹೋಗಲೂಬಹುದು. ನಾನು ಹಾಗೆ ಹೋಗಲಾರೆ. ನನಗೆ ಮಾಂತ್ರಿಕ ಮಹಾಶಯರನ್ನು ನೋಡಲೇಬೇಕು."

"ಅದು ಒಳ್ಳೆಯ ಮಾತೇ ನಿಜ! ದುರ್ಮುಖಿ ರಾಜನ ಹೊರತು ಉಳಿದೆಲ್ಲರಿಗೂ ಈ ಕ್ಷಣದಿಂದಲೇ ಸ್ವೇಚ್ಛೆ ಕೊಟ್ಟುಬಿಟ್ಟೆನು. ಬೇಕಾದರೆ ಇಲ್ಲಿಯ ಅರಣ್ಯ ಮೃಗಗಳ ನಡುವೆ, ಹಾಯಾಗಿ ಬದುಕುವವರು ಬದುಕಲಿ" ಎಂದು ಎಲ್ಲಾ ವಿಜಯ ತನ್ನದೇ ಎಂಬ ಹಾಗೆ ಹೇಳಿ, ಕಟುಕ ಕರಡಿಯವನು ಆನೆಯನ್ನು ಮುಂದಕ್ಕೆ ಹೊರಡಿಸಿದನು.

ಮೊಂಡು ಸೊಂಡಿಲಿನ ಆನೆಯನ್ನು ಅವರು ಬೇಗ ಬೇಗನೆ ಓಡಿಸುತ್ತಿರಲು, ಉಗ್ರದಂಡನೂ ಉಳಿದವರೂ ಸ್ವಲ್ಪ ಹಿಂದೆ ಹಿಂದೆ ಬಿದ್ದರು.

ಆಗ ಆಕಸ್ಮಾತ್ತಾಗಿ ಕರಡಿ ಕಟುಕರವನ ಮುಂದೆ ಮರಗಳ ಗುಂಪಿನಿಂದ ಎರಡು ಆನೆಗಳು ಬಂದು ಅಡ್ಡಗಟ್ಟಿದುವು. ಅವುಗಳ ಮೇಲಿದ್ದ ನಾಲ್ಕು ಮಂದಿ ಸೈನಿಕರು, "ಉದಯಗಿರಿ ಮಹಾರಾಜರಿಗೆ ಜಯವಾಗಲಿ!" ಎಂದು ಗರ್ಜಿಸಿ ಅವನ ಕಡೆಗೆ ಬಾಣಗಳನ್ನು ಪ್ರಯೋಗಿಸತೊಡಗಿದರು.—(ಇನ್ನೂ ಇದೆ)

